(ನೀರಲ್ಲಿ ಜಾಲಿಸಿ ಶುದ್ಧಗೊಳಿಸಿ ನಾಲ್ಕು ಪದರಾಗಿ ಮಡಿಚಿ ಎಡಭಾಗದಲ್ಲಿ ಇಟ್ಟುಕೊಳ್ಳಬೇಕು. 'ವಿಸ್ಸೃತ್ಯ' ಪದದ ಬದಲು 'ವಿಸ್ತೀರ್ಯ' ಎಂದು ಹೃಷೀಕೇಶತೀರ್ಥೀಯ ಪಾಠ.)

ಬ್ರಹ್ಮಯಜ್ಞ ಮತ್ತು ದೇವ - ಋಷಿ - ಪಿತೃತರ್ಪಣಕಾಲ ವಿಚಾರ

ಭಗವತ್ಪಾದರ ವಾಕ್ಯಗಳಿಗೆ ಅನೇಕಾರ್ಥಗಳು ಇರುವುದರಿಂದ ವಿಶ್ವನಾಥಸೂರಿಗಳ ಕುಮಾರರಾದ ನಾರಾಯಣಪಂಡಿತರೇ ಮೊದಲಾದವರು ಈ ವಾಕ್ಯಗಳಿಗೆ ಬೇರೊಂದು ರೀತಿ ವ್ಯಾಖ್ಯಾನ ನೀಡಿದ್ದಾರೆ -

' ಗಾಯತ್ರ್ಯಾ ಚಾಂಜಲಿಂ ದತ್ವಾ ಧ್ಯಾತ್ವಾ ಸೂರ್ಯಗತಂ ಹರಿಮ್ '

ಎಂಬ ಆಚಾರ್ಯರ ವಾಕ್ಯ ಅರ್ಘ್ಯ ನೀಡುವ ವಿಷಯವನ್ನು ನಿರೂಪಿಸುತ್ತದೆ. ಅನಂತರ 'ಮಂತ್ರತಃ ಪರಿವೃತ್ಯಾಥ ಸಮಾಚಮ್ಯ ಸುರಾದಿಕಾನ್ । ತರ್ಪಯಿತ್ವಾ ನಿಪೀಡ್ಯಾಥ ವಾಸೋ ವಿಸ್ಸೃತ್ಯ ಚಾಂಜಸಾ' ಎಂಬ ಭಾಗ ಬ್ರಹ್ಮಯಜ್ಞ - ದೇವ - ಋಷಿ - ಪಿತೃತರ್ಪಣವನ್ನು ನಿರೂಪಿಸುತ್ತದೆ. ಅನಂತರ 'ಅರ್ಕಮಂಡಲಗಂ ವಿಷ್ಣುಂ ಧ್ಯಾತ್ವೈವ ತ್ರಿಪದೀಂ ಜಪೇತ್' ಎಂಬುದು ಗಾಯತ್ರೀಜಪಕ್ಕೆ ಸಂಬಂಧಿಸಿದೆ.

ಈ ವ್ಯಾಖ್ಯಾನದ ಪ್ರಕಾರ, ಸಂಧ್ಯಾವಂದನೆಯು ಅರ್ಘ್ಯಪ್ರಧಾನಕ ಮತ್ತು ಗಾಯತ್ರೀ ಜಪಪ್ರಧಾನಕವೆಂಬುದಾಗಿ ಎರಡು ತೆರನಾಗಿದೆ. ಅರ್ಘ್ಯದವರೆಗೆ ಸಂಧ್ಯಾವಂದನೆ ಮಾಡಿ, ಸಂಧ್ಯಾವಂದನೆಯನ್ನು ನಿಲ್ಲಿಸಿ, ಬ್ರಹ್ಮಯಜ್ಞ ಪಿತೃತರ್ಪಣಾದಿಗಳನ್ನು ಮುಗಿಸಿ ಅನಂತರ ಗಾಯತ್ರೀಮಂತ್ರಜಪ ಮಾಡಬೇಕೆಂದು ಅಭಿಪ್ರಾಯವಾಗುತ್ತದೆ.

ಆದರೆ ಸೂರ್ಯೋದಯಕ್ಕಿಂತ ಮೊದಲು ಬ್ರಹ್ಮಯಜ್ಞ ಪಿತೃತರ್ಪಣಗಳನ್ನು ಅನೇಕ ಪ್ರಮಾಣಗಳು ನಿಷೇಧಿಸುತ್ತವೆ -

೧. ಮಹತಃ ಪಂಚಯಜ್ಞಾಸ್ತು ದಿವೈವೇತ್ಯಾಹ ಗೌತಮಃ ।

ಮಹಾತ್ಮರು ನಡೆಸುವ ದೇವಯಜ್ಞ - ಪಿತೃಯಜ್ಞ ಮುಂತಾದ ಪಂಚಯಜ್ಞಗಳು ಸೂರ್ಯೋದಯಾನಂತರವೇ ನಡೆಯುತ್ತವೆ.

೨. ಪ್ರಾತರ್ಮಧ್ಯಂದಿನೇ ವಾಽಪಿ ಬ್ರಹ್ಮಯಜ್ಞೋ ವಿಧೀಯತೇ ।
ಪ್ರಾತರ್ಯದಿ ತದಾ ಪ್ರಾತರಾಹುತ್ಯಾಃ ಪರತೋ ಭವೇತ್ ॥
ಮಧ್ಯಾಹ್ನೇ ತರ್ಪಣಾತ್ ಪ್ರಾಗ್ವೈ ವೈಶ್ವದೇವಾತ್ ಪರತ್ರ ಚ ।
(ದಕ್ಷಸ್ಮೃತಿ)

ಸೂರ್ಯೋದಯಾನಂತರ ಅಥವಾ ಮಧ್ಯಾಹ್ನ ಕಾಲದಲ್ಲಿ ಬ್ರಹ್ಮಯಜ್ಞವನ್ನು ಮಾಡಬೇಕು. ಬೆಳಿಗ್ಗೆ ಮಾಡುವುದಾದರೆ, ಬೆಳಿಗ್ಗೆ ನಡೆಸುವ ಅಗ್ನಿಹೋತ್ರ ಹೋಮದ ನಂತರ ಮಾಡಬೇಕು. ಮಧ್ಯಾಹ್ನ ಮಾಡುವುದಾದರೆ, ಪಿತೃತರ್ಪಣಕ್ಕಿಂತ

ಮೊದಲು ಅಥವಾ ವೈಶ್ವದೇವಾನಂತರ ಮಾಡಬಹುದು.

೩. ಅಜಪಿತ್ವಾ ತು ಗಾಯತ್ರೀಂ ಬ್ರಹ್ಮಯಜ್ಞಂ ಕರೋತಿ ಯಃ ।
ಸ ಬ್ರಹ್ಮಹಾ ಸಮುದ್ದಿಷ್ಟಃ ಸರ್ವಕರ್ಮಸು ಗರ್ಹಿತಃ ।।

(ವ್ಯಾಸಸ್ಮೃತಿಃ)

ಗಾಯತ್ರೀ ಜಪ ಮುಗಿಸದೇ ಬ್ರಹ್ಮಯಜ್ಞವನ್ನು ಮಾಡುವವನು ಬ್ರಹ್ಮಹತ್ಯಾಪಾಪವನ್ನು ಪಡೆಯುತ್ತಾನೆ. ಸಕಲ ಕರ್ಮಗಳಿಂದ ಬಹಿಷ್ಕೃತನೂ ಆಗುತ್ತಾನೆ.

೪. ಪ್ರಾತರ್ಹೋಮಂ ತಥಾ ಕುರ್ಯಾದ್ ದೇವರ್ಷಿಪಿತೃತರ್ಪಣಮ್ ।

- ಮಾಘಮಾಹಾತ್ಮ್ಯ

ಬೆಳಿಗ್ಗೆ ಸೂರ್ಯೋದಯಾನಂತರವೇ ದೇವರ್ಷಿ ಪಿತೃತರ್ಪಣ ಮಾಡಬೇಕು.

೫. ದೇವಪೂಜಾಂ ತಥಾ ಕೃತ್ವಾ ಬ್ರಹ್ಮಯಜ್ಞಂ ಸಮಾಚರೇತ್ ।

- ಭಾರದ್ವಾಜ ಸಂಹಿತಾ

ದೇವಪೂಜೆಯನ್ನು ಮಾಡಿ ಬ್ರಹ್ಮಯಜ್ಞವನ್ನು ಮಾಡಬೇಕು.

೬. ವೈಶ್ವದೇವಂ ಬಲಿಂ ಕೃತ್ವಾ ಬ್ರಹ್ಮಯಜ್ಞಂ ಸಮಾಚರೇತ್ ।

- ಸ್ಕಾಂದ, ಕಾರ್ತಿಕಮಾಹಾತ್ಮ್ಯ

ವೈಶ್ವದೇವ ಬಲಿಹರಣ ಮುಗಿಸಿ ಬ್ರಹ್ಮಯಜ್ಞ ಮಾಡಬೇಕು.

೭. ಸೌಕರ್ಯೇ ಸ್ನಾತ ಆಚಾಂತಃ ಕುರ್ಯಾನ್ಮಾಧ್ಯಾಹ್ನಿಕಕ್ರಿಯಾಮ್ ।
ತರ್ಪಣಂ ಚೇಶ ದೇವಾದೇಃ ಗೃಹೀ ಸ್ವಾಧ್ಯಾಯತರ್ಪಣಮ್ ।।

ಯೋಗದೀಪಿಕಾ ಪಟಲ - ೨ ಶ್ಲೋ - ೯೨

ಅನುಕೂಲವಿರುವಲ್ಲಿ ಮಧ್ಯಾಹ್ನ ಸ್ನಾನ ಆಚಮನಾದಿಗಳನ್ನು ಮಾಡಿ ಸಂಧ್ಯಾವಂದನವನ್ನು ಮುಗಿಸಿ ದೇವ-ಋಷಿ ತರ್ಪಣ ಬ್ರಹ್ಮಯಜ್ಞ ಮಾಡಬೇಕು.

ಮಧ್ಯಾಹ್ನೇ ನಿಷ್ಕ್ರಿಯಾದನ್ಯಯತ್ಯಾದೀನಾಂ ಭವೇತ್ಸದಾ ।
ಉಪಸ್ಥಾನಂ ತು, ಸರ್ವೇಷಾಂ ವಿಷ್ಣ್ವಾದ್ಯಂ ದೇವತರ್ಪಣಮ್ ।।
ಆರ್ಷಂ ಚ ಪೈತ್ರಕಂ ಚಾಽಪಿ ಯತ್ಯನ್ಯೇಷಾಂ ವಿಧೀಯತೇ ।
ಸ್ವಾಧ್ಯಾಯ . . . . . ।।

-ಸನ್ಯಾಸಪದ್ಧತಿ ಅ - ೩, ಶ್ಲೋ - ೧೬೩ - ೪

ಮಧ್ಯಾಹ್ನಕಾಲದಲ್ಲಿ ಪರಮಹಂಸರಿಗಿಂತ ಭಿನ್ನರಾದ ಮೂವರು ಯತಿಗಳಿಗೆ 'ಉಪಸ್ಥಾನ'ವು ಹೇಳಲ್ಪಟ್ಟಿದೆ. ಎಲ್ಲಾ ಯತಿಗಳಿಗೂ ವಿಷ್ಣ್ವಾದಿ ದೇವತಾ ತರ್ಪಣ ಸಾಮಾನ್ಯವಾಗಿದೆ. ಗೃಹಸ್ಥ ವಾನಪ್ರಸ್ಥರಿಗೆ ಋಷಿ-ಪಿತೃ ತರ್ಪಣ ಮತ್ತು ಬ್ರಹ್ಮಯಜ್ಞವು ವಿಹಿತವಾಗಿದೆ. ಇಲ್ಲಿ ಕಾಲ ನಿರ್ದೇಶ ಗಮನಾರ್ಹ.

ಈ ಎಲ್ಲಾ ಪ್ರಮಾಣಗಳೂ ಸೂರ್ಯೋದಯಾನಂತರವೇ ಬ್ರಹ್ಮಯಜ್ಞ ದೇವ ಋಷಿ ಪಿತೃತರ್ಪಣ ಮಾಡಬೇಕೆಂದು ನಿರೂಪಿಸಿರುವುದು ಸ್ಫುಟವಾಗಿದೆ. ಈ ಎಲ್ಲಾ ಪ್ರಮಾಣಗಳ ವಿಮರ್ಶೆಯೊಂದಿಗೆ ಶ್ರೀ ರಾಘವೇಂದ್ರತೀರ್ಥರ ಶಿಷ್ಯರಾದ ಸ್ಮೃತಿಮುಕ್ತಾವಲೀಕಾರರೂ ಮತ್ತು ಸದಾಚಾರಸ್ಮೃತಿ ವ್ಯಾಖ್ಯಾನಕಾರರಾದ ಶ್ರೀಕೃಷ್ಣಾಚಾರ್ಯರು, ಸೂರ್ಯಾರ್ಘ್ಯಾನಂತರದಲ್ಲಿ ಪ್ರಧಾನವಾದ ಗಾಯತ್ರೀಜಪವನ್ನು ಮಾಡದೇ ಅರ್ಘ್ಯಕ್ಕೇ ನಿಲ್ಲಿಸಿ, ಪುನಃ ಬ್ರಹ್ಮಯಜ್ಞತರ್ಪಣಾದಿ ಕಾರ್ಯವನ್ನು ಮಾಡುವುದು ಸೂಕ್ತವಲ್ಲವೆಂದು, ಬ್ರಹ್ಮಯಜ್ಞ-ದೇವ-ಋಷಿ-ಪಿತೃತರ್ಪಣಕಾರ್ಯಗಳನ್ನು ಹಗಲಿನಲ್ಲಿ ಸಂಧ್ಯಾ ನಂತರವೇ ಮಾಡಬೇಕೆಂದು ನಿರ್ಣಯ ಮಾಡಿದ್ದಾರೆ.

ಈ ವಿಷಯದಲ್ಲಿ ನಾರಾಯಣ ಪಂಡಿತರು (ವಿಶ್ವನಾಥ ಸೂರಿಗಳ ಮಕ್ಕಳಾದ ಸದಾಚಾರಸ್ಮೃತಿ ವ್ಯಾಖ್ಯಾನಕಾರರು) ತಮ್ಮ ವ್ಯಾಖ್ಯಾನದ ಹಿನ್ನೆಲೆಯನ್ನು ವಿವದಪಡಿಸಿದ್ದಾರೆ -

ಸೂರ್ಯೋದಯಕ್ಕಿಂತ ಮುಂಚೆ ಗಾಯತ್ರೀ ಜಪಕ್ಕಿಂತ ಮೊದಲೇ ಬ್ರಹ್ಮಯಜ್ಞ ದೇವರ್ಷಿ ತರ್ಪಣಗಳನ್ನು ವಿಧಾನಮಾಡುವ ಅನೇಕ ಪ್ರಮಾಣಗಳು ಇವೆ -

ಶುಚಿಃ ಸಂಧ್ಯಾಮುಪಾಸೀತ ಕುರ್ಯಾದ್ದೇವರ್ಷಿತರ್ಪಣಮ್ ।<br>
ತಿಷ್ಠನ್ನುದಯಪರ್ಯಂತಂ ಗಾಯತ್ರ್ಯಷ್ಟಶತಂ ಜಪೇತ್ ॥<br>
- ವಿಷ್ಣುಧರ್ಮೋತ್ತರ

ಶುಚಿಯಾಗಿ ಸಂಧ್ಯಾವಂದನೆಯನ್ನು ಮಾಡಬೇಕು. ಅಂದರೆ, ಸಂಧ್ಯೆ ಅರ್ಘ್ಯ ಪ್ರಧಾನಕವೆಂಬ ಹಿನ್ನೆಲೆಯಲ್ಲಿ ಅರ್ಘ್ಯ ನೀಡಿದ ನಂತರ ದೇವ ಋಷಿ ಪಿತೃತರ್ಪಣ ನೀಡಬೇಕು. ನಿಂತುಕೊಂಡೇ ಸೂರ್ಯೋದಯದ ತನಕ ೧೦೮ ಗಾಯತ್ರೀ ಜಪಿಸಬೇಕು.

ದೇವಾದಿತರ್ಪಣಾತ್ ಪೂರ್ವಂ ಸಂಧ್ಯಾಂಗತ್ವೇನ ಯೋ ಜಪೇತ್ ।<br>
ಗಾಯತ್ರೀಮನ್ಯಮಂತ್ರಾಂಶ್ಚ ತತ್ಸರ್ವಂ ನಿಷ್ಫಲಂ ಭವೇತ್ ॥<br>
- ವಿಷ್ಣುತೀರ್ಥೀಯ ಸನ್ಯಾಸ ಪದ್ಧತಿ

ದೇವ-ಋಷಿ-ತರ್ಪಣಕ್ಕಿಂತ ಮೊದಲು ಸಂಧ್ಯಾಂಗ ಗಾಯತ್ರಿಯನ್ನಾಗಲೀ ಇತರ ಮಂತ್ರಗಳನ್ನಾಗಲೀ ಜಪಿಸಿದರೆ, ಅದು ನಿಷ್ಫಲವಾಗುತ್ತದೆ.

ಇಂತಹ ಅನೇಕ ಪ್ರಮಾಣಗಳ ಹಿನ್ನೆಲೆಯಲ್ಲಿ ಅರ್ಘ್ಯಾಂತ ಸಂಧ್ಯಾವಂದನೆಯ ನಂತರ ಬ್ರಹ್ಮಯಜ್ಞ- ದೇವರ್ಷಿ ತರ್ಪಣ. ಆಮೇಲೆ ಗಾಯತ್ರೀ ಜಪವು ಪ್ರಮಾಣ ಸಮ್ಮತವೇ ಆಗಿದೆಯೆಂದು ಸಮರ್ಥಿಸಿದ್ದಾರೆ.

ಹೀಗೆ ಎರಡೂ ಪಕ್ಷಗಳೂ ಪ್ರಮಾಣ ಮೂಲಕವಾದಾಗ ವಿರೋಧ ಅಪರಿಹಾರ್ಯವೆನಿಸುವುದು. ಇದನ್ನು ನಾರಾಯಣ ಪಂಡಿತರೇ ಹೀಗೆ ಪರಿಹರಿಸಿದ್ದಾರೆ -

ಮಾಧ್ಯಂದಿನರು ಉದಯಕ್ಕಿಂತ ಮೊದಲು ಹೋಮ ಮಾಡುವವರು (ಅನುದಿತ ಹೋಮಿಗಳು) ಬಹ್ವೃಚರು ಸೂರ್ಯೋದಯಾನಂತರದಲ್ಲಿ ಹೋಮ ಮಾಡುವವರು. ಆದ್ದರಿಂದ ಯಾವ ಪ್ರಮಾಣವಚನಗಳು ಸೂರ್ಯೋದಯಾನಂತರವೇ ಮತ್ತು ಮಧ್ಯಾಹ್ನದಲ್ಲಿ ಬ್ರಹ್ಮಯಜ್ಞ - ದೇವ - ಋಷಿ - ಪಿತೃತರ್ಪಣವನ್ನು ನಿರೂಪಿಸುತ್ತಿವೆಯೋ ಅವು ಸೂರ್ಯೋದಯಾನಂತರದಲ್ಲಿ ಹೋಮವನ್ನು ನಡೆಸುವ ಬಾಹ್ವೃಚರನ್ನು (ಋಗ್ವೇದಿಗಳನ್ನು) ಸಂಬಂಧಿಸಿ ಪ್ರವೃತ್ತವಾಗಿವೆ. ಉದಯಕ್ಕಿಂತ ಪೂರ್ವದಲ್ಲಿ ಹೋಮಿಸುವ ಮಾಧ್ಯಂದಿನರು ಅರ್ಘ್ಯಾಂತ ಸಂಧ್ಯೆಯನ್ನು ಪೂರೈಸಿ ಬ್ರಹ್ಮಯಜ್ಞ ದೇವ ಋಷಿ ಪಿತೃ ತರ್ಪಣ ಮಾಡಿ ಅಗ್ನಿಹೋತ್ರ ಹೋಮ ಮುಗಿಸಿ, ಸೂರ್ಯೋದಯವಾಗುವ ತನಕ ಗಾಯತ್ರೀಜಪ ಮಾಡಬೇಕು -

'ತಿಷ್ಠನ್ನುದಯಪರ್ಯಂತಂ ಗಾಯತ್ರ್ಯಷ್ಟಶತಂ ಜಪೇತ್' (ಸ. ಸಮೃತಿ) ಹೀಗೆ ಮಾಧ್ಯಂದಿನರನ್ನು ಗಮನದಲ್ಲಿರಿಸಿಕೊಂಡು ಸೂರ್ಯೋದಯಕ್ಕಿಂತ ಮೊದಲೇ ಬ್ರಹ್ಮಯಜ್ಞ ತರ್ಪಣಾದಿಗಳು ಕಾರ್ಯವೆಂಬ ವಾಕ್ಯಗಳು ಪ್ರವೃತ್ತವಾಗಿವೆ. ಹೀಗೆ ಅಧಿಕಾರಿ ಭೇದ ಮತ್ತು ಶಾಖಾಭೇದದಿಂದ ಕರ್ಮಭೇದವಿರುವುದರಿಂದ ವಿರೋಧವಿರುವುದಿಲ್ಲ.

(ಅನುದಿತ ಹೋಮಿನಾಂ ತು ಉದಯಾತ್ ಪ್ರಾಕ್ ತರ್ಪಣಂ ತತಃ ಪೂರ್ವಂ ಬ್ರಹ್ಮಯಜ್ಞಮ್ । ಸ ಚ ಉಷಃ ಕಾಲೇ ನಿಯಮೇನ ಸಂಧ್ಯಾಸಮಯ ಏವ ಪ್ರಾಪ್ನೋತಿ । ಅಕೃತಸಂಧ್ಯಸ್ಯ ಚಾನ್ಯಸ್ಮಿನ್ ಕರ್ಮಣ್ಯನಧಿಕಾರಾ -ದರ್ಘ್ಯಾಂತಂ ಸಂಧ್ಯಾಪ್ರಧಾನಪದಾರ್ಥಂ ಕೃತ್ವಾ, ತದನಂತರಂ ಬ್ರಹ್ಮಯಜ್ಞಂ, ತರ್ಪಣಂ, ಪ್ರಾತರಗ್ನಿಹೋತ್ರಾದಿಕಂ ಚ ಕೃತ್ವಾ, ಗಾಯತ್ರೀಜಪಂ ಆ ಸೂರ್ಯೋದಯಂ ಕರ್ತವ್ಯಮಿತಿ । (ವೈಶ್ವನಾಥೀಯ ನಾರಾಯಣಪಂಡಿತ -ವ್ಯಾಖ್ಯಾ)

ಇದಲ್ಲದೇ ಬ್ರಹ್ಮಯಜ್ಞ ಕಾಲವನ್ನು ಸ್ಮೃತಿಗಳಲ್ಲಿ ಮೂರು ತೆರನಾಗಿ ನಿರೂಪಿಸಿದ್ದಾರೆ -

**ಸ ಚಾರ್ವಾಕ್ ತರ್ಪಣಾತ್ ಕಾರ್ಯಃ ಪಶ್ಚಾದ್ವಾ ಪ್ರಾತರಾಹುತೇಃ ।**
**ಅಥವಾ ವೈಶ್ವದೇವಾಂತೇ ಬ್ರಹ್ಮಯಜ್ಞಸ್ತ್ರಿಧಾ ಮತಃ ॥**

ಸೂರ್ಯೋದಯ ಪೂರ್ವದಲ್ಲಿ ದೇವ ಋಷಿ ತರ್ಪಣಕ್ಕಿಂತ ಮೊದಲು ಬ್ರಹ್ಮಯಜ್ಞ ಮಾಡಬೇಕು. ಅಥವಾ ಸೂರ್ಯೋದಯ ನಂತರ ಅಗ್ನಿಗೆ ಆಹುತಿ

ನೀಡಿದ್ದಾದ ಮೇಲೆ ಬ್ರಹ್ಮಯಜ್ಞ ಮಾಡಬಹುದು. ಅಥವಾ ವೈಶ್ವದೇವದ ಕೊನೆಯಲ್ಲಿಯೂ ಮಾಡಬಹುದು.

ಅನುದಿತಹೋಮಿಗಳಾದ ಮಾಧ್ಯಂದಿನರಿಗೆ ಸೂರ್ಯೋದಯಕ್ಕಿಂತ ಪೂರ್ವದಲ್ಲೇ ಬ್ರಹ್ಮಯಜ್ಞ ತರ್ಪಣಗಳು ನಿರೂಪಿಸಲ್ಪಟ್ಟಿವೆ. ತೈತ್ತಿರೀಯ ಶ್ರುತಿಯೂ ಅಧಿಕಾರಿಭೇದ ಹಾಗೂ ಶಾಖಾಭೇದದ ಹಿನ್ನೆಲೆಯಲ್ಲಿ ಮೂರು ತೆರನಾಗಿ ಬ್ರಹ್ಮಯಜ್ಞ ಕಾಲವನ್ನು ನಿರೂಪಿಸುತ್ತದೆ -

'ತಥಾ ಚ ತೈತ್ತಿರೀಯಶ್ರುತೌ ಬ್ರಹ್ಮಯಜ್ಞಸ್ಯ ಉಷಃ ಕಾಲಃ, ಉದಯ ಕಾಲಃ ಉದಯೋತ್ತರಕಾಲಶ್ಚೇತಿ ವಿಕಲ್ಪೇನ ಕಾಲತ್ರಯಮಾಮ್ನಾತಮ್ ।' (ನಾರಾಯಣಪಂಡಿತವ್ಯಾಖ್ಯಾ)

ಇದಲ್ಲದೇ ಆಶ್ವಲಾಯನರಿಗೂ ಸೂತ್ರದಲ್ಲಿ ಬ್ರಹ್ಮಯಜ್ಞಾನಂತರವೇ ತರ್ಪಣವು ವಿಹಿತವಾಗಿದೆ. ಆದ್ದರಿಂದ ಸೂರ್ಯೋದಯಕ್ಕಿಂತ ಮೊದಲು ಹೋಮ ವಿಧಿಯನ್ನು ಹೊಂದಿರುವ ಆಶ್ವಲಾಯನ ಮಾಧ್ಯಂದಿನರ ಅನುಷ್ಠಾನ ಕ್ರಮ ಹೀಗಾಗುತ್ತದೆ -

ಅರ್ಘ್ಯದವರೆಗೆ ಸಂಧ್ಯಾವಂದನೆ, ಅನಂತರ ಬ್ರಹ್ಮಯಜ್ಞ, ತರ್ಪಣ - ಹೋಮ- ಸೂರ್ಯೋದಯಪರ್ಯಂತ ಗಾಯತ್ರೀ ಜಪ.

ನಾರಾಯಣ ಪಂಡಿತಾಚಾರ್ಯರು ತಮ್ಮ ವ್ಯಾಖ್ಯಾನಕ್ಕೆ ಸಂವಾದಿಯಾಗಿ ಶ್ರೀಕೃಷ್ಣನ ಕರ್ಮಾನುಷ್ಠಾನವನ್ನು ನಿರೂಪಿಸುವ ಭಾಗವತ ಶ್ಲೋಕಗಳನ್ನು ಉದಾಹರಿಸಿ, ತಮ್ಮದೇ ಆದ ಶೈಲಿಯಲ್ಲಿ ಅದನ್ನು ವ್ಯಾಖ್ಯಾನಿಸಿದ್ದಾರೆ.

'ಅಥಾಪ್ಲುತೋಽಂಭಸ್ಯಮಲೇ ಯಥಾವಿಧಿ
ಕ್ರಿಯಾಕಲಾಪಂ ಪರಿಧಾಯ ವಾಸಸೀ ।
ಚಕಾರ ಸಂಧ್ಯೋಪಗಮಾದಿ ಸತ್ತಮೋ
ಹುತಾನಲೋ ಬ್ರಹ್ಮ ಜಜಾಪ ವಾಗ್ಯತಃ ।
ಉಪಸ್ಥಾಯಾರ್ಕಮುದ್ಯಂತಂ ತರ್ಪಯಿತ್ವಾಽತ್ಮನಃ ಕಲಾಃ ।
ದೇವಾನ್ ಋಷೀನ್ ಪಿತೄನ್ ವಿಪ್ರಾನ್ ವೃದ್ಧಾನಭ್ಯರ್ಚ್ಯ ಚಾತ್ಮವಾನ್ ।'

- ಭಾಗವತ - ೧೦.೭೦. ೬.

ಶ್ರೀಕೃಷ್ಣನು ನೀರಿನಲ್ಲಿ ಶಾಸ್ತ್ರೋಕ್ತವಾಗಿ ಸ್ನಾನ ಮಾಡಿ ಮಡಿ ವಸ್ತ್ರ ಧರಿಸಿ, ಸಂಧ್ಯಾವಂದನ (ಅರ್ಘ್ಯದವರೆಗೆ) ಮಾಡಿ ಬ್ರಹ್ಮಯಜ್ಞ ಹಾಗೂ ಅಗ್ನಿಯಲ್ಲಿ ಹೋಮ ಮಾಡಿ, ಸೂರ್ಯೋದಯ ಪರ್ಯಂತ ಗಾಯತ್ರೀ ಜಪ ಮಾಡಿದನು. ಸೂರ್ಯೋದಯದ ನಂತರ ತನ್ನ ರೂಪಗಳನ್ನೇ ಪೂಜಿಸಿ, ದೇವ-ಋಷಿ-ಪಿತೃ-ಬ್ರಾಹ್ಮಣರು ಮತ್ತು ಗುರುಹಿರಿಯರನ್ನು ವಂದಿಸಿದನು. (ತಥಾ ಚಾತ್ರ ಸಂಧ್ಯೋಪಗಮಃ ಸಂಧ್ಯೋಪಾಸನಮ್ । ಆದಿಶಬ್ದಾತ್ತು ಬ್ರಹ್ಮಯಜ್ಞ। ಯದ್ವಾ ಸಂಧ್ಯಾ ಉಪಗಮಶ್ಚೇತಿ ದ್ವಂದ್ವಃ । ವೇದಾಧ್ಯಯನಂ - ತರ್ಪಣಂ ಚ ಕೃತ್ವಾ

ಹುತಾನಲೋ ಹೋಮಂ ಕೃತ್ವಾ ಬ್ರಹ್ಮ ಗಾಯತ್ರೀಂ, ಸೂರ್ಯೋದಯ ಪರ್ಯಂತಂ ಜಜಾಪ - ನಾರಾಯಣ ಪಂಡಿತರ ಅಪ್ರಕಟಿತ ವ್ಯಾಖ್ಯಾ)

ಹೀಗೆ ಎರಡು ಅನುಷ್ಠಾನಗಳೂ ಪ್ರಮಾಣ ಮೂಲಕವಾದುದರಿಂದ ಅಧಿಕಾರಿಭೇದ ಮತ್ತು ಶಾಖಾಭೇದದಿಂದ ಅನುಷ್ಠಾನವನ್ನು ಅರಿತು ಶಾಸ್ತ್ರ ವಾಕ್ಯಗಳಲ್ಲಿ ಅವಿರೋಧವನ್ನು ತಿಳಿಯಬೇಕು. || ೬ ||

ಅರ್ಕಮಂಡಲಗಂ ವಿಷ್ಣುಂ ಧ್ಯಾತ್ವೈವ ತ್ರಿಪದೀಂ ಜಪೇತ್ ।
ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಮ್ || ೭ ||

ಸೂರ್ಯಮಂಡಲದಲ್ಲಿರುವ ಗಾಯತ್ರೀ ಮಂತ್ರ ಪ್ರತಿಪಾದ್ಯನಾದ ಶ್ರೀಮನ್ನಾರಾಯಣನನ್ನು 'ಧ್ಯೇಯಃ ಸದಾ' ಎಂಬ ಮಂತ್ರದಿಂದ ಧ್ಯಾನಿಸಿ ಒಂದು ಸಾವಿರ ಅಥವಾ ನೂರು ಕನಿಷ್ಠ ಪಕ್ಷವೆಂದರೆ, ಹತ್ತು ಗಾಯತ್ರಿಯನ್ನು ಜಪಿಸಬೇಕು. || ೭ ||

ಆ ಸೂರ್ಯದರ್ಶನಾತ್ ತಿಷ್ಠೇತ್ ತತಸ್ತೂಪವಿಶೇತ ವಾ ।
ಪೂರ್ವಾಂ ಸಂಧ್ಯಾಂ ಸನಕ್ಷತ್ರಾಮ್ ಉತ್ತರಾಂ ಸದಿವಾಕರಾಮ್ ।
ಉತ್ತರಾಮುಪವಿಶ್ಯೈವ ವಾಗ್ಯತಃ ಸರ್ವದಾ ಜಪೇತ್ || ೮ ||
ಧ್ಯೇಯಃ ಸದಾ ಸವಿತೃಮಂಡಲ ಮಧ್ಯವರ್ತೀ
ನಾರಾಯಣಃ ಸರಸಿಜಾಸನ ಸನ್ನಿವಿಷ್ಟಃ ।
ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ
ಹಾರೀ ಹಿರಣ್ಮಯವಪುರ್ಧೃತಶಂಖಚಕ್ರಃ || ೯ ||

ಸೂರ್ಯೋದಯವಾಗುವ ತನಕ ಗಾಯತ್ರೀ ಮಂತ್ರವನ್ನು ಜಪಿಸಬೇಕು. ಅನಂತರ ಕುಳಿತುಕೊಳ್ಳಲೂಬಹುದು. ಪ್ರಾತಃ ಕಾಲೀನ ಸಂಧ್ಯಾವಂದನೆಯನ್ನು ನಕ್ಷತ್ರಗಳಿರುವಾಗಲೂ ಸಾಯಂಸಂಧ್ಯೆಯನ್ನು ಸೂರ್ಯನಿರುವಾಗಲೂ ಮಾಡುವುದು ಪ್ರಶಸ್ತ. ಸಾಯಂಸಂಧ್ಯೆಯನ್ನು ಕುಳಿತು ಮೌನದಿಂದ ನಡೆಸಬೇಕು.

ಶ್ರೀಮನ್ನಾರಾಯಣನು ಸೂರ್ಯಮಂಡಲದಲ್ಲಿ ಪದ್ಮಾಸೀನನಾಗಿದ್ದಾನೆ. ತೋಳಲ್ಲಿ ವಂಕಿ, ಕಿವಿಯಲ್ಲಿ ಮಕರಕುಂಡಲ, ಶಿರಸ್ಸಿನಲ್ಲಿ ಕಿರೀಟ, ಕತ್ತಿನಲ್ಲಿ ಮುತ್ತಿನ ಹಾರಗಳನ್ನು ಧರಿಸಿದ್ದಾನೆ. ಬಂಗಾರದ ಮೈಬಣ್ಣ, ಎರಡು ಕೈಗಳಿಂದ ಶಂಖ-ಚಕ್ರಗಳನ್ನು ಧರಿಸಿದ್ದಾನೆ. ಇಂತಹ ನಾರಾಯಣನನ್ನು ಮನದಲ್ಲಿ ಧ್ಯಾನಿಸಬೇಕು.

**ವಿವರಣೆ** - ಗಾಯತ್ರೀ ಜಪದ ಕಾಲ ಹಾಗೂ ಧ್ಯಾನಶ್ಲೋಕ ಮುಂತಾದವನ್ನು ಭಗವತ್ಪಾದರು ಇಲ್ಲಿ ವಿವರಿಸಿದ್ದಾರೆ. ಗಾಯತ್ರೀ ಎಂದರೆ ಸ್ತ್ರೀ ದೇವತೆಯಲ್ಲ.

ಸೂರ್ಯಮಂಡಲದಲ್ಲಿರುವ ನಾರಾಯಣನೇ ಗಾಯತ್ರೀಶಬ್ದವಾಚ್ಯ. 'ಧ್ಯೇಯಃ ಸದಾ' ಎಂಬ ನರಸಿಂಹ ಪುರಾಣದ ಧ್ಯಾನಶ್ಲೋಕವನ್ನು ಇಲ್ಲಿ ಆಚಾರ್ಯರು ಉಲ್ಲೇಖಿಸಿ, ನಾರಾಯಣನೇ ಗಾಯತ್ರೀಮಂತ್ರ ಪ್ರತಿಪಾದ್ಯ ಎಂಬುದನ್ನು ಸ್ಫುಟಪಡಿಸಿದ್ದಾರೆ. ಗಾಯತ್ರೀಮಂತ್ರಜಪಕ್ರಮ - ಯೋಗ್ಯವಾದ ಸ್ಥಳ - ಫಲ ಇತ್ಯಾದಿಗಳನ್ನು ಶ್ರೀ ಶ್ರೀನಿವಾಸತೀರ್ಥರು ಮತ್ತು ಶ್ರೀ ಕೃಷ್ಣಾಚಾರ್ಯರು ತಮ್ಮ ಗ್ರಂಥದಲ್ಲಿ ವಿವರವಾಗಿ ನಿರೂಪಿಸಿದ್ದಾರೆ. ಅವಶ್ಯವಾಗಿ ತಿಳಿಯಬೇಕಾದ ಕೆಲವು ಅಂಶಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಸಂಧ್ಯಾವಂದನೆ ಮೂರುಕಾಲದಲ್ಲೂ ಮಾಡಬೇಕು

ದ್ವಿಜನಾದವನು ಮೂರು ಕಾಲದಲ್ಲೂ ಸಂಧ್ಯಾವಂದನೆ ಮಾಡಬೇಕು - 'ಸಂಧ್ಯಾತ್ರಯಂ ತು ಕರ್ತವ್ಯಂ ದ್ವಿಜೇನಾತ್ಮವಿದಾ ಸದಾ ||' ಬೆಳಗು ಜಾವ ಸಂಧ್ಯಾಕಾಲದಲ್ಲಿ ಧ್ಯೇಯನಾದ ಪರಮಾತ್ಮನಿಗೆ ಗಾಯತ್ರೀ ಎಂದು ನಾಮ. ಅಯೋಗ್ಯರಿಂದ ಪಡೆದ ದಾನ ಅನ್ನದೋಷ - ಪಾತಕ - ಉಪಪಾತಕಗಳಿಂದ, ಜಪಿಸುವ ಸಾಧಕನನ್ನು ವಿಮುಕ್ತಿಗೊಳಿಸುವುದರಿಂದ 'ಗಾಯತ್ರೀ' ಎಂಬ ಹೆಸರು ಅನ್ವರ್ಥವಾಗಿದೆ.

ವಿಶ್ವದ ಹುಟ್ಟಿಗೆ ಕಾರಣನಾದ ಶ್ರೀಹರಿಯನ್ನು ತಿಳಿಸಿಕೊಡುವುದರಿಂದ ಮಾಧ್ಯಾಹ್ನಿಕ ಸಂಧ್ಯೆಗೆ 'ಸಾವಿತ್ರೀ' ಎಂಬ ಹೆಸರಿದೆ. ಸಕಲ ವಾಙ್ಮನೋಭಿಮಾನಿ ದೇವತೆಯಾಗಿ ಸಾಧನೆ ಮಾಡಿಸುವ ಸಾಯಂಕಾಲದಲ್ಲಿ ಉಪಾಸ್ಯನಾದ ಪರಮಾತ್ಮನಿಗೆ 'ಸರಸ್ವತೀ' ಎಂಬುದಾಗಿ ನಾಮ. ಹೀಗೆ ಕಾಲಭೇದದಿಂದ ಒಬ್ಬನೇ ಪರಮಾತ್ಮನಿಗೆ ಮೂರು ನಾಮಗಳಿವೆ.

ಆಸನ

'ಆಸೀನಃ ಸಂಭವಾತ್ |' ಎಂಬುದಾಗಿ ಸೂತ್ರಕಾರರು ನಿರ್ದೇಶಿಸಿದಂತೆ ಜಪ - ತಪಸ್ಸುಗಳನ್ನು ಕುಳಿತು ಮಾಡುವುದು ಪ್ರಶಸ್ತ. ಕುಳಿತುಕೊಳ್ಳುವ ಆಸನಗಳು ಭಿನ್ನವಾಗಿರುವಂತೆ ಫಲವೂ ಭಿನ್ನವಾಗಿದೆ -

ಬಿದಿರಿನ ಆಸನದಲ್ಲಿ ಕುಳಿತು ಜಪ ಮಾಡಿದರೆ ದರಿದ್ರನೂ, ಕಲ್ಲಿನಲ್ಲಿ ಕುಳಿತು ಜಪಿಸಿದರೆ ರೋಗಿಯೂ, ಕೇವಲ ಭೂಮಿಯಲ್ಲಿ ಕುಳಿತು ಜಪಿಸಿದಲ್ಲಿ ದುಃಖಿಯೂ, ಕಟ್ಟಿಗೆಯ ಆಸನದಲ್ಲಿ ಕುಳಿತಲ್ಲಿ ದರಿದ್ರನೂ, ಹುಲ್ಲಿನ ಆಸನದಲ್ಲಿ ಕುಳಿತಲ್ಲಿ ಅಪಕೀರ್ತಿವಂತನೂ, ಕಂಬಳಿಯಲ್ಲಿ ಕುಳಿತವನು ದುಃಖಿಯೂ ಆಗುವನು. ಆದ್ದರಿಂದ ಇಂತಹ ಆಸನಗಳಲ್ಲಿ ಕುಳಿತುಕೊಳ್ಳದೇ ದರ್ಭಾಸನದಲ್ಲಿ ಕುಳಿತುಕೊಳ್ಳಬೇಕು. ಇದು ಸರ್ವಸಿದ್ಧಿದಾಯಕ. ಕೃಷ್ಣಾಜಿನವು ಜ್ಞಾನಸಿದ್ಧಿಯನ್ನೂ, ವ್ಯಾಘ್ರಾಸನವು ಮೋಕ್ಷವನ್ನು ಕರುಣಿಸುವುದು.

**ಗಾಯತ್ರೀ ಜಪಕ್ಕೆ ಸ್ಥಾನಭೇದದಿಂದ ವಿಶಿಷ್ಟಫಲ**

ಗಾಯತ್ರಿಯನ್ನು ಮನೆಯಲ್ಲಿ ಜಪಿಸಿದ್ದಕ್ಕಿಂತ ದನದ ಕೊಟ್ಟಿಗೆಯಲ್ಲಿ ಜಪಿಸಿದರೆ ಹತ್ತುಪಟ್ಟು ಹೆಚ್ಚು ಫಲವೂ ತೀರ್ಥಗಳ ಸನ್ನಿಧಿಯಲ್ಲಿ ಮಾಡುವ ಜಪಕ್ಕೆ ಸಾವಿರಪಾಲು ಫಲವೂ ಶಾಲಿಗ್ರಾಮ ಪ್ರತಿಮೆ ಮುಂತಾದವುಗಳಿಗೆ ಅಭಿಮುಖವಾಗಿ ಜಪಿಸುವವನಿಗೆ ಅನಂತಫಲವೂ ಲಭಿಸುತ್ತದೆ.

**ಗಾಯತ್ರೀ ಜಪ ಕ್ರಮ**

೧. ಗಾಯತ್ರಿಯನ್ನು ಮನಸ್ಸಿನಲ್ಲೇ ಜಪಿಸಿದಲ್ಲಿ ಒಂದು ಗಾಯತ್ರಿಗೆ ಸಾವಿರ ಗಾಯತ್ರೀ ಜಪದ ಫಲವು, ಮೆಲ್ಲನೇ ಉಚ್ಚರಿಸಿದಲ್ಲಿ ಒಂದಕ್ಕೆ ನೂರರ ಫಲವೂ, ಗಟ್ಟಿಯಾಗಿ ಉಚ್ಚರಿಸಿದಲ್ಲಿ ಅಲ್ಪಫಲವೂ ಲಭಿಸುತ್ತದೆ.

೨. ಗಾಯತ್ರಿಯನ್ನು ಜಪಿಸುವಾಗ ಐದು ಕಡೆ ನಿಲ್ಲಿಸಿ ಅರ್ಥಾನುಸಂಧಾನಪೂರ್ವಕ ಜಪಿಸಬೇಕು. ಇದರಿಂದ ಪಂಚಮಹಾಪಾತಕಗಳು ನಷ್ಟವಾಗುತ್ತವೆ. ವೇಗ - ಆಲಸ್ಯದಿಂದ ವ್ಯತ್ಯಸ್ತವಾಗಿ ಜಪಿಸಿದಲ್ಲಿ ಮಹಾಪಾತಕಗಳನ್ನು ಮಾಡಿದಂತಾಗುವುದು. ಆದ್ದರಿಂದ 'ಓಂ । ಭೂರ್ಭುವಃ ಸ್ವಃ । ತತ್ಸವಿತುರ್ವರೇಣ್ಯಮ್ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್' ಎಂಬುದಾಗಿ ಐದು ಕಡೆ ನಿಲ್ಲಿಸಿ ಜಪಿಸಬೇಕು.

೩. ಮನಸ್ಸನ್ನು ಪ್ರಸನ್ನವಾಗಿರಿಸಿ, ರುಚಿಯಾಗಿ, ಮಂತ್ರಾರ್ಥ ಚಿಂತನೆಯೊಂದಿಗೆ ಯಾರ ಜೊತೆಗೂ ಮಾತಾಡದೆಯೇ ವ್ಯಗ್ರತೆ ಅಥವಾ ಆಲಸ್ಯವನ್ನು ತೊರೆದು ಜಪ ಮಾಡಿದಲ್ಲಿ ಅಂತಹ ಜಪವು ಸಂಪೂರ್ಣ ಫಲದಾಯಕವಾಗುವುದು.

೪. ಬೆಳಿಗ್ಗೆ ಗಾಯತ್ರೀ ಜಪ ಕಾಲದಲ್ಲಿ ಅಂಗೈಗಳನ್ನು ಮೇಲ್ಮುಖವಾಗಿ ಇಟ್ಟುಕೊಳ್ಳಬೇಕು. ಸಾಯಂಕಾಲ ಕೆಳಮುಖವಾಗಿ ಇಟ್ಟುಕೊಳ್ಳಬೇಕು. ಮಧ್ಯಾಹ್ನದಲ್ಲಿ ಎರಡು ಹೆಗಲಿಗೆ ಅಭಿಮುಖವಾಗಿ ಕೈಗಳನ್ನು ಇಟ್ಟುಕೊಂಡು ಜಪಿಸಬೇಕು.

೫. ಬೆರಳುಗಳನ್ನು ಒಟ್ಟಿಗೆ ಸೇರಿಸಿಕೊಂಡು ಎರಡೂ ಕೈಗಳನ್ನು ಸ್ವಲ್ಪ ಬಾಗಿಸಿಕೊಂಡು ಜಪಿಸಬೇಕು. ಬೆರಳುಗಳನ್ನು ಬಿಡಿಸಿಕೊಂಡು ಜಪಿಸಿದಲ್ಲಿ ಜಪದ ಫಲ ದೊರಕುವುದಿಲ್ಲ.

**ವಿರೋಧ ಪರಿಹಾರ**

ಗಾಯತ್ರೀಮಂತ್ರವು ವೇದಾಧ್ಯಯನಕ್ಕೆ ಅರ್ಹತೆ ನೀಡುವ ಹಿನ್ನೆಲೆಯಲ್ಲಿ 'ವೇದಮಾತೆ' ಎನ್ನಿಸಿದೆ. ಮೂಲವಾಗಿದೆ. ವೇದವನ್ನು ಪಠಿಸುವಾಗ ಬೆರಳುಗಳ ರೇಖೆಯನ್ನು ಉಪಯೋಗಿಸಲಾಗುತ್ತದೆ. ಆದ್ದರಿಂದ ಗಾಯತ್ರಿಯನ್ನು ಜಪಿಸುವಾಗಲೂ ಬೆರಳುಗಳಲ್ಲಿರುವ ರೇಖೆಗಳಿಂದ ಜಪಿಸಬೇಕು. ಜಪಮಾಲೆಯಿಂದ

ಜಪಿಸಬಾರದು -

ವೇದಮಾತಾ ತು ಗಾಯತ್ರೀ ವೇದಃ ಪರ್ವಸು ಗೀಯತೇ ।
ಪರ್ವಭಿಶ್ಚ ಜಪೇನ್ನಿತ್ಯಂ ನ ಮಾಲಾಭಿಃ ಕಥಂಚನ ।।

ಇದರಂತೆ, ತುಳಸೀಮಾಲೆಯಿಂದಲೇ ಗಾಯತ್ರೀಮಂತ್ರವನ್ನು ಜಪಿಸಬೇಕು ಎಂಬ ವಾಕ್ಯಗಳೂ ಇದ್ದಾವೆ -

ತುಲಸೀಕಾಷ್ಠಮಣಿಭಿಃ ನಿರ್ಮಿತಾಂ ತು ಪ್ರಯತ್ನತಃ ।
ಗಾಯತ್ರ್ಯಾದಿಜಪಂ ಕುರ್ಯಾತ್ ಅನ್ಯಥಾ ನಿರಯಂ ವ್ರಜೇತ್ ।।

ಶ್ರೀನಿವಾಸತೀರ್ಥರು ಇವುಗಳನ್ನು ವಿಮರ್ಶಿಸಿ, ನಾವು ಜಪಿಸುವ ಓಂಕಾರ ವ್ಯಾಹೃತಿ ಸಹಿತವಾದ ಗಾಯತ್ರಿಯನ್ನು ಅಂಗುಲೀ ಪರ್ವಗಳಿಂದಲೇ ಜಪಿಸಬೇಕೆಂದೂ ಮತ್ತು ವ್ಯಾಹೃತಿಗಳಿಲ್ಲದ ಬ್ರಹ್ಮಗಾಯತ್ರಿಯನ್ನು ತುಳಸೀಮಣಿಯಲ್ಲಿ ಜಪಿಸಬೇಕೆಂದೂ ಸಮರ್ಥಿಸಿ ವಿರೋಧಪರಿಹಾರ ಮಾಡಿದ್ದಾರೆ.

ಪರ್ವಗಳಲ್ಲಿ ಗಾಯತ್ರೀ ಜಪ ಕ್ರಮ

ಗಾಯತ್ರಿಯನ್ನು ಬೆರಳುಗಳ ಒಳಭಾಗದಲ್ಲಿರುವ ರೇಖೆಗಳಲ್ಲಿ ಎಣಿಕೆ ಮಾಡಿ ಜಪಿಸಬೇಕು. ಇಲ್ಲಿ ಎರಡು ತೆರನಾದ ಸಂಪ್ರದಾಯಗಳಿವೆ -

೧. ಅನಾಮಿಕಾ ಮೂಲದಿಂದ ಆರಂಭಿಸಿ ಮಧ್ಯಮಾಂಗುಲಿ ಮೂಲದವರೆಗೆ ಹತ್ತು ಸಂಖ್ಯೆಯನ್ನು ಪೂರೈಸುವುದು. ಈ ವಿಧಾನದ ಪ್ರಕಾರ, ಮಧ್ಯಮಾಂಗುಲಿಯ ಮತ್ತು ಅನಾಮಿಕಾಂಗುಲಿಯ ಮಧ್ಯದ ಎರಡು ರೇಖೆಗಳು 'ಮೇರು'ವೆನಿಸುತ್ತದೆ. ಇದನ್ನು ಪ್ರದಕ್ಷಿಣೆ ಮಾಡಿ ಜಪವನ್ನು ಮಾಡಬೇಕು.

ಮಧ್ಯಮಾನಾಮಿಕಾಮಧ್ಯಂ ಮೇರುದ್ವಿತಯಕಲ್ಪಿತಮ್ ।
ಮೇರುಂ ಪ್ರದಕ್ಷಿಣೀಕುರ್ವನ್ ಅನಾಮೀ ಮೂಲ ಪರ್ವ ತು ।
ಆರಭ್ಯ, ಮಧ್ಯಮಾಮೂಲಪರ್ವಾಂತಂ ಗಣಯೇತ್ ಕ್ರಮಾತ್ ।।
(ಕೃ. ಸ್ಮೃ. ಮು)

೨. ಅನಾಮಿಕ ಮಧ್ಯದ ರೇಖೆಯಿಂದ ಆರಂಭಿಸಿ, ಅದರ ಕೆಳರೇಖೆ, ಅನಂತರ ಕಿರುಬೆರಳಿನಿಂದ ಮುಂದುವರೆಯುತ್ತ ತರ್ಜನೀ ಮೂಲಭಾಗದವರೆಗೆ ಹತ್ತಾಗಿ ಎಣಿಕೆಮಾಡಿ ಜಪಿಸಬೇಕು. ಈ ಪದ್ಧತಿಯಲ್ಲಿ ನಡುಬೆರಳಿನಲ್ಲಿರುವ ಎರಡು ಸಂಧಿಗಳೇ ಪರ್ವಗಳೆನಿಸುತ್ತವೆ -

ಆರಭ್ಯಾನಾಮಿಕಾಮಧ್ಯ ಪರ್ವಪ್ರಾದಕ್ಷಿಣಕ್ರಮಾತ್ ।
ತರ್ಜನೀಮೂಲ ಪರ್ಯಂತಂ ಸಂಖ್ಯಯಾ ತ್ರಿಪದೀಂ ಜಪೇತ್ ।
ಮಧ್ಯಪರ್ವದ್ವಯಂ ಮೇರುಃ ತಾಂ ಮೇರುಂ ನಾತಿಲಂಘಯೇತ್ ।।

ಈ ಎರಡು ಪದ್ಧತಿಗಳಲ್ಲಿ ಯಾವುದೇ ಕ್ರಮದಿಂದಲಾಗಲೀ ಮೇರುಪ್ರದಕ್ಷಿಣಾಕಾರವಾಗಿ ಪರ್ವಗಳಲ್ಲಿ ಎಣಿಕೆ ಮಾಡಿ ಗಾಯತ್ರಿಯನ್ನು ಜಪಿಸಬೇಕು.

**ಆಶೌಚದಲ್ಲಿ ಗಾಯತ್ರಿಜಪ ಕ್ರಮ**

ಜಾತಾಶೌಚ - ಮೃತಾಶೌಚಗಳಲ್ಲಿ ಸಂಧ್ಯಾವಂದನೆ ಸಂಪೂರ್ಣವಾಗಿ ಮಾಡಬೇಕೆಂದು ನಿರೂಪಿಸುವ ಪ್ರಮಾಣ ವಚನಗಳಿವೆ. ಭಾಗಶಃ ಸಂಧ್ಯಾವಂದನೆಯನ್ನು ನಿರೂಪಿಸುವ ಪ್ರಮಾಣವಚನಗಳೂ ಇವೆ. ಇವು ಅಧಿಕಾರಿಭೇದದಿಂದ ಹೊರಟಿವೆ. ಆಶೌಚದಲ್ಲಿ ಮಾಡಬೇಕಾದ ಸಂಧ್ಯಾಕ್ರಮ ಹೀಗಿದೆ -

ಪ್ರಾಣಾಯಾಮವನ್ನು ಮಂತ್ರೋಚ್ಚಾರಣೆ ಮಾಡದೇ ಮಾಡಬೇಕು. ಮಾರ್ಜನ ಮಂತ್ರಗಳನ್ನು ಮನಸ್ಸಿನಿಂದ ಸ್ಮರಿಸಿ ಮಾರ್ಜನ ಮಾಡಿಕೊಳ್ಳಬೇಕು. ಸ್ಪಷ್ಟವಾಗಿ ಗಾಯತ್ರಿಯನ್ನು ಉಚ್ಚರಿಸಿ ಸೂರ್ಯನಿಗೆ ಅರ್ಘ್ಯ ನೀಡಬೇಕು. ಗಾಯತ್ರಿಯನ್ನು ಆಶೌಚದಲ್ಲಿ ಜಪಿಸುವುದು ಪ್ರಮಾಣ ಹಾಗೂ ಶಿಷ್ಟಾಚಾರ ಸಮ್ಮತವಲ್ಲ (ಅತ್ರ ಕಶ್ಚಿತ್ - "ಸೂತಕಿನಾಮಪಿ ದಶವಾರಂ ಜಪ್ಯಮ್ । 'ಆಪನ್ನಶ್ಚಾಶುಚಿಃ ಕಾಲೇ ತಿಷ್ಠನ್ನಪಿ ಜಪೇದ್ದಶ' ಇತ್ಯಾಶ್ವಲಾಯನೋಕ್ತೇಃ" ಇತ್ಯಾಹ । ತತ್ತು ಆಚಾರ ವಿರುದ್ಧತ್ವಾದುಪೇಕ್ಷ್ಯಮ್ - ಶ್ರೀನಿವಾಸತೀರ್ಥೀಯ ಟಿಪ್ಪಣಿ ) ॥೯॥

**ಗಾಯತ್ರ್ಯಾಸ್ತ್ರಿಗುಣಂ ವಿಷ್ಣುಂ ಧ್ಯಾಯನ್ನಷ್ಟಾಕ್ಷರಂ ಜಪೇತ್ ।**
**ಪ್ರಣಮ್ಯ ದೇವಾನ್ ವಿಪ್ರಾಂಶ್ಚ ಗುರೂಂಶ್ಚ ಪರಿಪಾರ್ಷದಾನ್ ।**
**ಏವಂ ಸರ್ವೋತ್ತಮಂ ವಿಷ್ಣುಂ ಧ್ಯಾಯನ್ನೇವಾರ್ಚಯೇದ್ಧರಿಮ್ ॥೧೦॥**

ಸಂಧ್ಯಾಂಗ ಗಾಯತ್ರಿಯನ್ನು ಜಪಿಸಿದ ನಂತರ, ವಿಷ್ಣುಭಕ್ತರಾದ ಇಂದ್ರಾದ್ಯಷ್ಟದಿಕ್ಪಾಲಕರನ್ನು, ಬ್ರಹ್ಮಾದಿ ದೇವತೆಗಳನ್ನು, ಜ್ಞಾನೋಪದೇಶಕರಾದ ಗುರುಗಳನ್ನು, ತಾಯಿ - ತಂದೆ ಹಾಗೂ ಬ್ರಾಹ್ಮಣರನ್ನು ನಮಸ್ಕರಿಸಿ, 'ಉದ್ಯದ್ಭಾಸ್ವತ್ ಸಮಾಭಾಸಃ' ಇತ್ಯಾದಿ ಮಂತ್ರ ಪ್ರತಿಪಾದ್ಯನಾದ ಶ್ರೀಮನ್ನಾರಾಯಣನನ್ನು ಧ್ಯಾನಿಸುತ್ತ ಗಾಯತ್ರಿಗಿಂತ ಮೂರುಪಟ್ಟು ನಾರಾಯಣಾಷ್ಟಾಕ್ಷರ ಮಂತ್ರ ಜಪಿಸಬೇಕು. ಹೀಗೆಯೇ ಎಲ್ಲೆಡೆಯೂ ಸರ್ವೋತ್ತಮನಾದ ಶ್ರೀವಿಷ್ಣುವನ್ನೇ ಧ್ಯಾನಿಸುತ್ತ ಪೂಜಿಸಬೇಕು.

**ವಿವರಣೆ - ಸಂಧ್ಯಾವಂದನೆಯ ನಂತರವೇ ನಾರಾಯಣಾಷ್ಟಾಕ್ಷರ ಮಂತ್ರ ಜಪಿಸಬೇಕು. ಮೂಲದಲ್ಲಿ ಗಾಯತ್ರೀಮಂತ್ರ ಜಪದ ನಂತರ ಅಷ್ಟಾಕ್ಷರ ಮಂತ್ರ ಜಪವನ್ನು ಮಾಡಿ,**

ದಿಗ್ ದೇವತಾ ನಮಸ್ಕಾರವನ್ನು ನಿರೂಪಿಸಿದಂತೆ ಭಾಸವಾಗುತ್ತದೆ. ಅದರ ಅಭಿಪ್ರಾಯವನ್ನು ವಿಷ್ಣುತೀರ್ಥರು ಸನ್ಯಾಸ ಪದ್ಧತಿಯಲ್ಲಿ ಸ್ಪಷ್ಟಪಡಿಸಿದ್ದಾರೆ -

ಗಾಯತ್ರೀ ಜಪ ಮುಗಿಸಿ ದಿಗ್‌ದೇವತೆಗಳನ್ನೂ ಮತ್ತು ಗುರುಹಿರಿಯರನ್ನೂ ತಾಯಿ-ತಂದೆಗಳನ್ನೂ ವಂದಿಸಿ ಅನಂತರ ಗಾಯತ್ರಿಯ ಮೂರುಪಟ್ಟು ಅಷ್ಟಾಕ್ಷರವನ್ನು ಜಪಿಸಬೇಕು. ಅನಂತರ ವಾಸುದೇವ ದ್ವಾದಶಾಕ್ಷರವೇ ಮೊದಲಾದ ಅಷ್ಟಮಹಾಮಂತ್ರಗಳನ್ನು ಹಾಗೂ ಅಭೀಷ್ಟಪ್ರದಗಳಾದ ಶ್ರೀನೃಸಿಂಹ ಶ್ರೀಕೃಷ್ಣ ಷಡಕ್ಷರ ಮೊದಲಾದ ಮಂತ್ರಗಳನ್ನು ಜಪಿಸಬೇಕು -

'ಅಭಿವಂದ್ಯ ತತೋ ದೇವೀಂ ತಥಾ ಸರ್ವಾಶ್ಚ ದೇವತಾಃ ।
ತತಸ್ತ್ರಿಗುಣಮಷ್ಟಾರ್ಣಂ ಅನ್ಯಾನ್ ಮಂತ್ರಾಂಶ್ಚ ಸಂಜಪೇತ್ ।
ಮೋಕ್ಷದಾನ್ ಕಾಮದಾಂಶ್ಚಾಽಪಿ ಯಥಾಕಾಮಂ ತು ವೈಷ್ಣವಾನ್ ॥'

ಔಪಾಸನಾ ವಿಧಿ

'ಏವಂ ಸರ್ವೋತ್ತಮಂ ಧ್ಯಾಯನ್' ಎಂಬ ವಾಕ್ಯವನ್ನು ಶ್ರೀಕೃಷ್ಣಾಚಾರ್ಯರು ಹೀಗೆ ವ್ಯಾಖ್ಯಾನಿಸಿದ್ದಾರೆ -

ಸರ್ವೋತ್ತಮನಾದ ಶ್ರೀವಿಷ್ಣುವನ್ನು ಔಪಾಸನಾಗ್ನಿಯಲ್ಲಿರುವ ಪರಶುರಾಮನೆಂಬ ಅನುಸಂಧಾನದೊಂದಿಗೆ ವಿಧ್ಯುಕ್ತ ಕ್ರಮದಿಂದ ಹವಿಷ್ಯ ಸಮರ್ಪಣೆಯೊಂದಿಗೆ ಪೂಜಿಸಬೇಕು.

ಅಥವಾ, ಔಪಾಸನಾನಂತರ ವಿಷ್ಣುಪ್ರೀತಿಗಾಗಿ ನಡೆಸಬೇಕಾದ ಶ್ರೌತ ಪೂಜಾ ಪದ್ಧತಿಯನ್ನು 'ಧ್ಯಾಯನ್ನೇವಾರ್ಚಯೇದ್ ಹರಿಮ್' ಎಂಬ ಪಾದ ನಿರೂಪಿಸುತ್ತದೆ. ಆ ಕ್ರಮ ಹೀಗಿದೆ -

೧. 'ಸಹಸ್ರ ಶೀರ್ಷಾ ಪುರುಷಃ' ಎಂಬ ಪುರುಷ ಸೂಕ್ತದ ಮೊದಲ ಮಂತ್ರದಿಂದ ಹೃದಯದಲ್ಲಿರುವ ಬಿಂಬರೂಪಿಯನ್ನು ಪ್ರತಿಮೆಯಲ್ಲಿ ಆಹ್ವಾನಿಸಬೇಕು.
೨. 'ಪುರುಷ ಏವೇದಂ' ಎಂಬ ಎರಡನೆಯ ಮಂತ್ರದಿಂದ ಆಸನ ಸಮರ್ಪಣೆ.
೩. 'ಏತಾವಾನಸ್ಯ' ಎಂಬ ಮೂರನೆಯ ಮಂತ್ರದಿಂದ ಅರ್ಘ್ಯ ಸಮರ್ಪಣೆ.
೪. 'ತ್ರಿಪಾದೂರ್ಧ್ವ' ಎಂಬ ನಾಲ್ಕನೆಯ ಮಂತ್ರದಿಂದ ಪಾದ್ಯ ಸಮರ್ಪಣೆ.
೫. 'ತಸ್ಮಾದ್ ವಿರಾಡಜಾಯತ' ಎಂಬ ಐದನೆಯ ಮಂತ್ರದಿಂದ ಆಚಮನ ಸಮರ್ಪಣೆ.
೬. 'ಯತ್ ಪುರುಷೇಣ' ಎಂಬ ಆರನೆಯ ಮಂತ್ರದಿಂದ ಸ್ನಾನ ಸಮರ್ಪಣೆ.
೭. 'ತಂ ಯಜ್ಞಂ' ಎಂಬ ಏಳನೆಯ ಮಂತ್ರದಿಂದ ವಸ್ತ್ರ ಸಮರ್ಪಣೆ.
೮. 'ತಸ್ಮಾದ್ ಯಜ್ಞಾತ್' ಎಂಬ ಎಂಟನೆಯ ಮಂತ್ರದಿಂದ ಉಪವೀತ ಸಮರ್ಪಣೆ.
೯. 'ತಸ್ಮಾದ್ ಯಜ್ಞಾತ್' ಎಂಬ ಒಂಬತ್ತನೆಯ ಮಂತ್ರದಿಂದ ಗಂಧ ಸಮರ್ಪಣೆ.

೧೦. 'ತಸ್ಮಾದಶ್ವಾ ಅಜಾಯಂತ' ಎಂಬ ಹತ್ತನೆಯ ಮಂತ್ರದಿಂದ ಪುಷ್ಪ ಸಮರ್ಪಣೆ.
೧೧. 'ಯತ್ ಪುರುಷಂ' ಎಂಬ ಹನ್ನೊಂದನೆಯ ಮಂತ್ರದಿಂದ ಧೂಪ ಸಮರ್ಪಣೆ.
೧೨. 'ಬ್ರಾಹ್ಮಣೋಽಸ್ಯ' ಎಂಬ ಹನ್ನೆರಡನೆಯ ಮಂತ್ರದಿಂದ ದೀಪ ಸಮರ್ಪಣೆ.
೧೩. 'ಚಂದ್ರಮಾ' ಎಂಬ ಹದಿಮೂರನೆಯ ಮಂತ್ರದಿಂದ ನೈವೇದ್ಯ ಸಮರ್ಪಣೆ.
೧೪. 'ನಾಭ್ಯಾ ಆಸೀತ್' ಎಂಬ ಹದಿನಾಲ್ಕನೆಯ ಮಂತ್ರದಿಂದ ನಮಸ್ಕಾರ ಸಮರ್ಪಣೆ.
೧೫. 'ಸಪ್ತಾಸ್ಯಾಸನ್' ಎಂಬ ಹದಿನೈದನೆಯ ಮಂತ್ರದಿಂದ ಪ್ರದಕ್ಷಿಣೆ ಸಮರ್ಪಣೆ.
೧೬. 'ಯಜ್ಞೇನ ಯಜ್ಞಂ' ಎಂಬ ಹದಿನಾರನೆಯ ಮಂತ್ರದಿಂದ ಹೃದಯಕ್ಕೆ ಪುನರಾಹ್ವಾನ.

ಈ ಶ್ರೌತ ಪೂಜೆಯನ್ನು ಬೆಳಿಗ್ಗೆ ಔಪಾಸನದ ನಂತರ ಮಾಡಬೇಕು -
ಔಪಾಸನಾತ್ ಪರಂ ವಿಷ್ಣೋಃ ಶ್ರೌತಪೂಜಾಂ ಕರೋತಿ ಯಃ |
ನಿತ್ಯಂ ಪ್ರಾತಃ ಸ ಪೂತಾತ್ಮಾ ವಿಷ್ಣುಲೋಕಂ ಸ ಗಚ್ಛತಿ ||

ಈ ಪದ್ಯದ ಕೊನೆಯ ಭಾಗ ಹೃಷೀಕೇಶತೀರ್ಥೀಯ ಪಾಠದಲ್ಲಿ ಹೀಗಿದೆ-
'ಸ್ಮೃತ್ವಾ ಸರ್ವೋತ್ತಮಂ ವಿಷ್ಣುಂ ಸ್ವಾಧ್ಯಾಯೇನಾರ್ಚಯೇದ್ಧರಿಮ್ |'
ಹರಿಸರ್ವೋತ್ತಮತ್ವಜ್ಞಾನ ಪೂರ್ವಕ ಪಾಠ - ಪ್ರವಚನ ಮಾಡಿ ಭಗವಂತನನ್ನು ಆರಾಧಿಸಬೇಕು ಎಂದರ್ಥ. || ೧೦ ||

ಧ್ಯಾನ ಪ್ರವಚನಾಭ್ಯಾಂ ಚ ಯಥಾಯೋಗ್ಯಮುಪಾಸನಮ್ |
ಧರ್ಮೇಣೇಜ್ಯಾಸಾಧನಾನಿ ಸಾಧಯಿತ್ವಾ ವಿಧಾನತಃ |
ಸ್ನಾತ್ವಾ ಸಂಪೂಜಯೇದ್ ವಿಷ್ಣುಂ ವೇದತಂತ್ರೋಕ್ತಮಾರ್ಗತಃ ||೧೧

ಧ್ಯಾನ ಮತ್ತು ಪ್ರವಚನಗಳಿಂದ ಅವರವರ ಯೋಗ್ಯತೆಗೆ ಅನುಗುಣವಾಗಿ ಶ್ರೀಹರಿಯ ಉಪಾಸನೆ ನಡೆಸಬೇಕು. ಧರ್ಮಮಾರ್ಗದಿಂದ ಪಂಚಯಜ್ಞ ಸಾಧನವಾದ ವಸ್ತುಗಳನ್ನು ದೊರಕಿಸಿಕೊಳ್ಳಬೇಕು. ಅನಂತರ ಮಧ್ಯಾಹ್ನ ಸ್ನಾನ ಮಾಡಿ ವೇದ - ಪಂಚರಾತ್ರ - ತಂತ್ರಸಾರಾದಿಗಳಲ್ಲಿ ನಿರೂಪಿಸಿದ ವಿಧಿಯಿಂದ ಶ್ರೀಹರಿಯನ್ನು ಪೂಜಿಸಬೇಕು.

ವಿವರಣೆ -

ಧ್ಯಾನ-ಪ್ರವಚನ

ಯಾವ ಅಡೆತಡೆ ಇಲ್ಲದೇ ನಿರಂತರ ಹೃದಯ ಕಮಲದಲ್ಲಿರುವ ಶ್ರೀಹರಿಯನ್ನು ಚಿಂತಿಸುವುದು ಧ್ಯಾನವೆನಿಸಿದೆ. ಅಪರಿಮಿತಾರ್ಥವುಳ್ಳ ಭಾರತ-ವೇದ-ಬ್ರಹ್ಮಸೂತ್ರ-[illegible]

ಪ್ರವಚನವೆನಿಸಿದೆ. ಧ್ಯಾನ ಮತ್ತು ಪಾಠ-ಪ್ರವಚನಗಳ ಮೂಲಕ ಹರಿಯ ಉಪಾಸನೆ ನಡೆಸಬೇಕು. ಮುಕ್ತಿಗೆ ಸೋಪಾನಗಳು ಶ್ರವಣ ಮನನ ನಿದಿಧ್ಯಾಸನಗಳು. ಶ್ರವಣ ಮತ್ತು ಮನನಗಳು ನಿರಂತರವಿರಲೇಬೇಕು. ಸಂಪೂರ್ಣ ತತ್ತ್ವ ನಿಶ್ಚಯವಿರುವವನಿಗೆ ಧ್ಯಾನ ಸುಗಮ. ಈ ಹಿನ್ನೆಲೆಯಲ್ಲಿ ಮನಸ್ಸೇ ಮೊದಲಾದ ಸಕಲೇಂದ್ರಿಯಗಳನ್ನು ವಿಷಯ ಪದಾರ್ಥಗಳಿಂದ ಶ್ರೀಹರಿಯೆಡೆಗೆ ಕೊಂಡೊಯ್ಯಲು ಪಾಠ ಪ್ರವಚನವೇ ಮುಖ್ಯ ಉಪಾಯವಾಗಿದೆ. ಅಪರೋಕ್ಷಜ್ಞಾನಿಗೂ ಪಾಠ ಪ್ರವಚನ ಅವಶ್ಯ ಕರ್ತವ್ಯ. ತಾನೇ ಮನೆಯಲ್ಲಿ ಶಾಸ್ತ್ರಾರ್ಥ ಚಿಂತನೆ ಮಾಡುವುದಕ್ಕಿಂತ ಯೋಗ್ಯರಾದ ಶಿಷ್ಯರಿಗೆ ಭಗವನ್ಮಾಹಾತ್ಮ್ಯವನ್ನು ಬೋಧಿಸುವುದು ನೂರು ಪಟ್ಟು ಫಲವನ್ನು ನೀಡುತ್ತದೆ.

ಬ್ರಾಹ್ಮಣನ ವೃತ್ತಿ

ಸದಾಚಾರ-ವೇದಾಧ್ಯಯನ-ಶಾಸ್ತ್ರ ಪಾಠ ಪ್ರವಚನ ಬ್ರಾಹ್ಮಣನ ಉಸಿರಾಗಿರಬೇಕು. ೧) ತಾನು ಯಜ್ಞ ಮಾಡುವುದು ೨) ಇನ್ನೊಬ್ಬರಿಂದ ಯಜ್ಞ ಮಾಡಿಸುವುದು ೩) ತಾನು ಅಧ್ಯಯನ ಮಾಡುವುದು ೪) ಇನ್ನೊಬ್ಬರಿಗೆ ಪ್ರವಚನ ಮಾಡುವುದು ೫) ದಾನ ತೆಗೆದುಕೊಳ್ಳುವುದು ೬) ತಾನು ದಾನ ನೀಡುವುದು. ಹೀಗೆ ಆರು ಬ್ರಾಹ್ಮಣನ ಪ್ರಮುಖ ಧರ್ಮಗಳು.

ವೃದ್ಧರಾದ ತಾಯಿ-ತಂದೆ-ಗುರುಗಳು ಪತ್ನೀ ಪುತ್ರರು ಅತಿಥಿ ಅಭ್ಯಾಗತರನ್ನು ಪೋಷಿಸಲು ಬ್ರಾಹ್ಮಣನು ಐಹಿಕ ಸಂಪತ್ತನ್ನು ಪಡೆಯಬಹುದು. ಆಯಾಯಾ ವ್ಯಕ್ತಿಗಳ ಸದಾಚಾರ ಪ್ರಾಮಾಣಿಕತೆ ಪಾಠ ಪ್ರವಚನಗಳಿಂದ ಪ್ರಭಾವಿತವಾದ ಸಮಾಜ, ಅವರನ್ನು ಪೋಷಿಸಬೇಕು. ಅನಿವಾರ್ಯ ಪ್ರಸಂಗದಲ್ಲಿ ಬ್ರಾಹ್ಮಣ ಯಾಚನ-ಕೃಷಿ-ವ್ಯಾಪಾರ ಮುಂತಾದವನ್ನು ಮಾಡಬಹುದು.

ಏಳು ವಸ್ತುಗಳನ್ನು ದಾನ ತೆಗೆದುಕೊಳ್ಳಬಾರದು

ದಾನವನ್ನು ಬ್ರಾಹ್ಮಣನು ತೆಗೆದುಕೊಳ್ಳಬಹುದಾದರೂ ಇದು ಸಂತೋಷದಾಯಕ ಕ್ರಿಯೆ ಅಲ್ಲ. ಜೀವನ ನಿರ್ವಹಣೆಗೆ ಅಗತ್ಯವಾದ ಸಂಪತ್ತನ್ನು ಹೊಂದಿದವನು ದಾನ ತೆಗೆದುಕೊಳ್ಳದಿರುವುದು ಉತ್ತಮ. ಯಜಮಾನನ ಪಾಪವೇ ದ್ರವ್ಯರೂಪದಿಂದ ನಮ್ಮ ಕಡೆ ಬರುತ್ತದೆ ಎಂಬ ಎಚ್ಚರ ಸದಾ ಜಾಗೃತವಿರಬೇಕು.

೧. ಎಳ್ಳು ೨. ಹಸು ೩. ಆನೆ ೪. ಕುದುರೆ ೫. ಪ್ರೇತಾನ್ನ (ಮೃತರ ಮನೆಯಲ್ಲಿ ಹನ್ನೊಂದನೇ ದಿನ ಪ್ರೇತಸ್ಥಾನದಲ್ಲಿ ಕುಳಿತು ಭೋಜನ ಮಾಡುವುದು) ೬. ಕೃಷ್ಣಾಜಿನ ೭. ಮಣಿ ಇವು ಏಳನ್ನು ದಾನ ತೆಗೆದುಕೊಳ್ಳುವುದು ಮಹಾ ಪಾಪಕಾರಿ. ವಿದ್ಯೆ-ತಪಸ್ಸು-ಸದಾಚಾರ - ಇಲ್ಲದ ವ್ಯಕ್ತಿ ದಾನ ತೆಗೆದುಕೊಂಡಲ್ಲಿ ಅವನು ಕಟ್ಟಿಗೆಯಂತೆ ಬೂದಿಯಾಗುವನು. ಈ ಹಿನ್ನೆಲೆಯಲ್ಲಿ ಬ್ರಾಹ್ಮಣನು ದಾನ ಸಂತೋಷಿಯಾಗಿರದೆ ದಾನಭೀರುವಾಗಿರಬೇಕು.

**ವೇದ - ಶಾಸ್ತ್ರ ಪ್ರವಚನ ಪ್ರವೃತ್ತಿಯಾಗಿರಬೇಕು**

ಪಾಠ - ಪ್ರವಚನ ಧನ ಸಂಪಾದನೆಯ ಮಾರ್ಗವಾಗಿರಬಾರದು. ಶ್ರೀವಿಷ್ಣು ಪ್ರೀತಿಗಾಗಿ ಫಲಾಪೇಕ್ಷೆಯನ್ನು ತೊರೆದು ನಡೆಸಬೇಕು. ಅಯಾಚಿತವಾಗಿ ಅನಾಯಾಸವಾಗಿ ಒದಗಿ ಬಂದ ದ್ರವ್ಯಾದಿಗಳಿಂದ ಜೀವನ ನಿರ್ವಹಿಸಬೇಕು. ದ್ರವ್ಯ ಸಂಪಾದನೆಗೆ ಇದನ್ನು ಉಪಾಯವಾಗಿಸಿಕೊಂಡರೆ, ಅಂದರೆ ಪಾಠ - ಪ್ರವಚನಗಳಿಗೆ ಇಂತಿಷ್ಟು ದ್ರವ್ಯ ನೀಡಬೇಕೆಂದು ಕರಾರು ಮಾಡಿದಲ್ಲಿ ಅದು 'ವೇದಶಾಸ್ತ್ರ ವಿಕ್ರಯ'ವೆನಿಸುತ್ತದೆ. ಇದು ಮಹಾಪಾತಕ. ದುಡ್ಡಿಗಾಗಿ ಯಾರು ವೇದಾಕ್ಷರಗಳನ್ನು ಹೇಳಿಕೊಡುವನೋ ಅಷ್ಟು ಭ್ರೂಣಹತ್ಯೆಗಳ ಪಾಪವನ್ನು ಆ ವಿಪ್ರನು ಪಡೆಯುತ್ತಾನೆ-

ವೇದಾಕ್ಷರಾಣಿ ಯಾವಂತಿ ನಿಯುಂಜ್ಯಾದರ್ಥಕಾರಣಾತ್ ।
ತಾವತೀಂ ಭ್ರೂಣಹತ್ಯಾಂ ವೈ ವೇದವಿಕ್ರಯ್ಯವಾಪ್ನುಯಾತ್ ॥

ಇದಲ್ಲದೇ ವೇದ ಶಾಸ್ತ್ರ ಪ್ರವಚನಗಳಲ್ಲಿ ಆರು ದೋಷ ಸಂಭವಿಸದಂತೆ ಎಚ್ಚರ ವಹಿಸಬೇಕು -

೧. ವೇದವನ್ನು ಅಯೋಗ್ಯರಿಗೆ ತಿಳಿಯುವಂತೆ ಪ್ರಕಟಿಸುವುದು 'ಪ್ರಖ್ಯಾಪನ'ವೆನಿಸಿದೆ. ೨. ವೇದವನ್ನು ಅಯೋಗ್ಯರ ಸಮೂಹದಲ್ಲಿ ಗಟ್ಟಿಯಾಗಿ ಅಧ್ಯಯನ ಮಾಡುವುದು 'ಪ್ರಾಧ್ಯಾಯನ'ವೆನಿಸುತ್ತದೆ. ೩. ಬ್ರಾಹ್ಮಣನು ಅಯೋಗ್ಯನಲ್ಲಿ ಕೇಳಿ ವೇದವನ್ನು ಓದುವುದು 'ಪ್ರಶ್ನಪೂರ್ವ ಪ್ರತಿಗ್ರಹ' ವೆನಿಸುತ್ತದೆ. ೪. ಅಯೋಗ್ಯರಿಂದ ಯಜ್ಞ ಮುಂತಾದ ವೈದಿಕ ಕರ್ಮಗಳನ್ನು ಮಾಡಿಸುವುದು 'ಯಾಜನ'ವೆನಿಸುತ್ತದೆ. ೫. ಅಯೋಗ್ಯರಿಗೆ ವೇದವನ್ನು ಉಪದೇಶಿಸುವುದು 'ಅಧ್ಯಾಪನ'ವೆನಿಸುತ್ತದೆ. ೬. ದುಡ್ಡಿಗಾಗಿ ಶಾಸ್ತ್ರಾರ್ಥ ವಿಚಾರವನ್ನು ನಡೆಸುವುದು ವಾದವೆನಿಸುವುದು. ಈ ಆರು ಬಗೆಯ 'ವೇದ ವಿಕ್ರಯ'ದಿಂದ ದ್ವಿಜನು ದೂರವಿರಬೇಕು

ಪ್ರಖ್ಯಾಪನಂ ಪ್ರಾಧ್ಯಯನಂ ಪ್ರಶ್ನಪೂರ್ವಪ್ರತಿಗ್ರಹಃ ।
ಯಾಜನಾಧ್ಯಾಪನೇ ವಾದಃ ಷಡ್ವಿಧೋ ವೇದವಿಕ್ರಯಃ ॥

**ದೇವತಾ ಪೂಜೆ**

ನಿತ್ಯವೂ ಶ್ರೀಹರಿ ಪ್ರೀತಿಗಾಗಿ ಪೂಜೆಯನ್ನು ನಡೆಸಬೇಕು. ಸ್ನಾನ ಮಾಡಿ, ವಸ್ತ್ರದಿಂದ ಶೋಧಿಸಿದ ನೀರನ್ನು ದೇವರ ಪೂಜೆಗಾಗಿ ತಂದು ಬೇರೆ ನೀರಿನಿಂದ ಕೈಕಾಲು ತೊಳೆದು ದೇವಮಂದಿರದ ಒಳಗೆ ಪ್ರವೇಶಿಸಿ, ದೀಪವನ್ನು ಪ್ರಜ್ವಲಿಸಿ, ದೇವಪೂಜೆಯ ಸ್ಥಳವನ್ನು ಗೋಮಯದಿಂದ ಸಾರಿಸಬೇಕು. ತಂತ್ರಸಾರೋಕ್ತ ಪದ್ಧತಿಯಿಂದ ಅಷ್ಟಮಹಾಮಂತ್ರ -ತತ್ತ್ವನ್ಯಾಸ - ಮಾತೃಕಾ ನ್ಯಾಸದೊಂದಿಗೆ ಆವರಣಪೂಜೆ ಕಲಶ ಪೂಜೆ ಮಾಡಿ, ದೇವಪೂಜೆ ವೈಶ್ವದೇವ ಮುಂತಾದ ಕಾರ್ಯಗಳನ್ನು ಮಾಡಬೇಕು. ಈ ಬಗ್ಗೆ 'ಪದ್ಯಮಾಲಾ' ಮುಂತಾದ ಅನೇಕ

ಗ್ರಂಥಗಳು ಕನ್ನಡಾನುವಾದ ಸಹಿತ ಉಪಲಬ್ಧವಿರುವ ಕಾರಣ ಇಲ್ಲಿ ಪೂಜಾ ಪದ್ಧತಿಯನ್ನು ವಿಸ್ತರಿಸಿಲ್ಲ.

ಇತರ ದೇವತಾಪೂಜಾಕ್ರಮ

ಬ್ರಹ್ಮರುದ್ರಾದಿ ದೇವತೆಗಳನ್ನು ಶ್ರೀವಿಷ್ಣು ಪರಿವಾರದವರೆಂಬ ಅನುಸಂಧಾನದೊಂದಿಗೆ ಪೂಜಿಸಬೇಕು. ಅವರಿಗೆ ಸ್ವಾತಂತ್ರ್ಯೇಣ ಪೂಜೆ ಶಾಸ್ತ್ರ ವಿಹಿತವಲ್ಲ. ರುದ್ರದೇವರ ಲಿಂಗಪೂಜೆ ಮಾಡುವಾಗ ಆ ಪ್ರತೀಕದ ಮೇಲೆ ಶಾಲಗ್ರಾಮವನ್ನಿಟ್ಟು, ಅಲ್ಲಿರುವ ಶ್ರೀಹರಿಗೆ ಪ್ರಧಾನ ಪೂಜೆ ಸಲ್ಲಿಸಿ, ಶ್ರೀಹರಿಪರಿವಾರವೆಂಬ ಅನುಸಂಧಾನದೊಂದಿಗೆ ರುದ್ರನನ್ನು ಪೂಜಿಸಬೇಕು. ಇದೇ ಕ್ರಮವನ್ನು ಇತರ ದೇವತಾಪೂಜೆಗೆ ಅನ್ವಯಿಸಿಕೊಳ್ಳಬೇಕು.

೧. ಅಂಗತ್ವೇನೈವ ಸಂಪೂಜ್ಯಾ ವಿಷ್ಣೋರಾರಾಧನೇ ಸುರಾಃ ।
ಇಂದ್ರಾದ್ಯಾ ಲೋಕಪಾಲಾಶ್ಚ ಪೂರ್ವೇ ಸಾಧ್ಯಾ ಮರುದ್ಗಣಾಃ ॥
ರಕ್ಷಕಾಂತರಬುದ್ಧ್ಯಾ ಚ ಸ್ವಾತಂತ್ರ್ಯೇಣಾಽಪಿ ದೇವತಾಃ ।
ನಾರ್ಚಯೇತ್ ಸರ್ವದಾ ವಿಪ್ರಃ ಪರಮಾಪದ್ಗತೋಽಪಿ ವಾ ।
ತಸ್ಮಾತ್ತು ಸಾತ್ವಿಕಾನ್ ದೇವಾನ್ ಅಂಗತ್ವೇನೈವ ಪೂಜಯೇತ್ ॥
(ಇತಿ ಸಂಗ್ರಹೇ)

೨. ತಸ್ಮಾದಾವರಣಂ ಹಿತ್ವಾ ಯೇ ಯಜಂತೀತರಾನ್ ಸುರಾನ್ ।
ತೇ ಯಾಂತಿ ನರಕಂ ಘೋರಂ ಕಲ್ಪಕೋಟಿಶತಾನಿ ವೈ ॥
(ಹಾರೀತಸ್ಮೃತಿ)

೩. ರುದ್ರಾಣಾಮಪಿ ದೇವಾನಾಂ ಯಾ ಸ್ವತಂತ್ರಾರ್ಚನ ಕ್ರಿಯಾ ।
ಸಾ ದುರ್ಗತಿಂ ನಯತ್ಯೇವ ವೈಷ್ಣವಾನ್ ವೀತಕಿಲ್ಬಿಷಾನ್ ॥

೪. ಅರ್ಚಯಿತ್ವಾ ಜಗನ್ನಾಥಂ ವೈಷ್ಣವಃ ಪುರುಷೋತ್ತಮಮ್ ।
ತದಾವರಣರೂಪೇಣ ಯಜೇದ್ದೇವಾನ್ ಸಮಂತತಃ ।
ವಿಷ್ಣ್ವಾವರಣ ರೂಪೇಣ ಪೂಜಯೇದರ್ಚಯೇತ್ ಸುರಾನ್ ॥
ಬ್ರಹ್ಮರುದ್ರೌ ತಥಾ ಸೂರ್ಯಮಿಂದ್ರಂ ಚಂದ್ರಾದಿಕಾನ್ ಸುರಾನ್ ।
ವಿಷ್ಣೋರಾವರಣಂ ಹಿತ್ವಾ ಪೂಜಕೋ ನರಕಂ ವ್ರಜೇತ್ ॥

೫. ತದಾವರಣರೂಪೇಣ ಪೂಜಯೇದರ್ಚಯೇತ್ ಸುರಾನ್ ।
ಮಾಂ ವಾ ಶಿವಂ ವಾ ಸೂರ್ಯಂ ವಾ ಹರೇರಾವರಣಂ ವಿನಾ ।
ಯಸ್ತು ಸಂಪೂಜಯೇದ್ ವಿಪ್ರಃ ಸ ಪಾಖಂಡೀ ಭವೇದ್ ಧ್ರುವಮ್ ।
(ಬ್ರಹ್ಮವಚನ)

ಸಾತ್ವಿಕತಂತ್ರಗಳಿಂದ ಪ್ರತಿಷ್ಠೆಗೊಳ್ಳದ ಭದ್ರಕಾಲೀ ಗಣೇಶ ಕೂಷ್ಮಾಂಡಗಣಗಳು ಭೈರವಾದಿಗಳು ಮದ್ಯ ಮಾಂಸಗಳನ್ನು ತಿನ್ನುವ ಇತರ

ಭೂತಾದಿಗಣಗಳು ತಾಮಸ ದೇವತೆಗಳೆಂದು ಪರಿಗಣಿಸಲ್ಪಟ್ಟಿದ್ದಾರೆ -

ಭದ್ರಕಾಲೀ ಗಣೇಶಶ್ಚ ಕೂಶ್ಮಾಂಡಾ ಭೈರವಾದಯಃ ।
ಮದ್ಯಮಾಂಸಾಶಿನಶ್ಚಾನ್ಯೇ ತಾಮಸಾಃ ಪರಿಕೀರ್ತಿತಾಃ ।।

ಆದರೆ ಗಣಪತಿ ಮುಂತಾದವರನ್ನು ತಂತ್ರಸಾರೋಕ್ತ ಪದ್ಧತಿಯಿಂದ ಅಲ್ಲಿ ಪ್ರಾಣಪ್ರತೀಕವನ್ನು ಆಹ್ವಾನಿಸಿ, ವಿಶ್ವಂಭರನ ಆವಾಹನೆ ಮಾಡಿ ಪೂಜಿಸಿದಲ್ಲಿ ಅದು ದೋಷಜನಕವಲ್ಲ. ತಾಮಸಪುರಾಣಗಳಲ್ಲಿ ಗಣೇಶ ಮುಂತಾದ ದೇವತೆಗಳಿಗೆ ಸ್ವಾತಂತ್ರ್ಯೇಣ ಪೂಜೆಯು ನಿರೂಪಿಸಲ್ಪಟ್ಟಿದೆ. ಅದನ್ನು ಸಾತ್ವಿಕ ಪುರಾಣ - ಸ್ಮೃತಿ ಗ್ರಂಥಗಳು ನಿಷೇಧಿಸಿ, ಅಂತರ್ಯಾಮಿಯಾದ ಪರಮಾತ್ಮನಲ್ಲಿ ಪೂಜೆ ಪರ್ಯವಸಾನವಾಗುವಂತೆ ಅನುಸಂಧಾನ ಪದ್ಧತಿಯನ್ನು ನಿರೂಪಿಸಲಾಗಿದೆ. ।। ೧೧ ।।

ಹೃಷೀಕೇಶತೀರ್ಥೀಯ ಪಾಠದಲ್ಲಿ ಈ ಶ್ಲೋಕದ ಮೊದಲ ಭಾಗ
" ಧ್ಯಾನಪ್ರವಚನಾಭ್ಯಾಂ ವಾ ಯಥಾಯೋಗ್ಯಮುಪಾಸ್ಯ ತಮ್" ।।
ಎಂದಿದೆ.

ವೈಶ್ವದೇವಂ ಬಲಿಂ ಚೈವ ಕುರ್ಯಾನ್ನಿತ್ಯಂ ತದರ್ಪಣಮ್ ।
ಇಷ್ಟಂ ದತ್ತಂ ಹುತಂ ಜಪ್ತಂ ಪೂರ್ತಂ ಯಚ್ಚಾತ್ಮನಃ ಪ್ರಿಯಮ್ ।
ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್
।। ೧೨ ।।

ವೈಶ್ವದೇವ ಮತ್ತು ಬಲಿಹರಣವನ್ನು ನಿತ್ಯವೂ ಶ್ರದ್ಧೆಯಿಂದ ಮಾಡಬೇಕು. ಯಜ್ಞ - ದಾನ - ಹೋಮಿಸಿದ್ದು ಜಪ - ಸರೋವರನಿರ್ಮಾಣ ತನಗೆ ಪ್ರಿಯವಾದ ಸಂಪತ್ತು - ಹೆಂಡತಿ - ಮಕ್ಕಳು ಹಾಗೂ ಇಂದ್ರಿಯಗಳಿಂದ ನಡೆಯುವ ಸರ್ವಕಾರ್ಯಗಳನ್ನು ಶ್ರೀಹರಿಗೆ ಅರ್ಪಿಸಬೇಕು.

ವಿವರಣೆ - ಇಲ್ಲಿ ಭಗವತ್ಪಾದರು ಪೂಜಾ ನಂತರದ ಅವಶ್ಯ ಕರ್ತವ್ಯವನ್ನು ನಿರೂಪಿಸಿದ್ದಾರೆ.

ಯಾವ ಯಜ್ಞದಲ್ಲಿ ಎಲ್ಲಾ ದೇವತೆಗಳಿಗೆ ಆಹುತಿ ನೀಡಲಾಗುವುದೋ ಅದು ವೈಶ್ವದೇವ. ಪರಮಾತ್ಮನಿಗೆ ಸಮರ್ಪಿಸಿದ ಅನ್ನದಲ್ಲಿ ಒಂದು ಸ್ವಲ್ಪ ಭಾಗವನ್ನು ತೆಗೆದು ವೈಶ್ವದೇವ ಮಾಡಬೇಕು. ಈ ವೈಶ್ವದೇವವು ಅನ್ನಶುದ್ಧಿಗೆ ಕಾರಣವಾಗಿದೆಯಾದ್ದರಿಂದ ಅವಶ್ಯ ಕರ್ತವ್ಯ. ಇದನ್ನು ಪಾಕಶಾಲೆಯ ಅಥವಾ ಯಾವುದೇ ಬೆಂಕಿಯು ಪ್ರಜ್ವಲಿಸುವ ಒಲೆಯಲ್ಲಿ ಮಾಡಬೇಕು. ತುಪ್ಪವನ್ನು ಅಗ್ನಿಯಲ್ಲಿ ಹಾಕಿ ಅನಂತರ ಹೋಮಿಸಬೇಕು. ಇಲ್ಲವಾದರೆ, ಈ ಕರ್ಮ

'ಆಸುರ'ವೆನಿಸುತ್ತದೆ.

ಒಮ್ಮೆ ಪರಮಾತ್ಮನಿಗೆ ಅರ್ಪಿತವಾದುದನ್ನು ಪರಮಾತ್ಮನಿಗೆ ಪುನರರ್ಪಿಸಬಹುದು

ಪರಮಾತ್ಮನಿಗೆ ಅನ್ನಾದಿ ನೈವೇದ್ಯ ಪದಾರ್ಥಗಳನ್ನು ಸಮರ್ಪಿಸಿ, ಪುನಃ ಅಗ್ನಿಪ್ರತೀಕದಲ್ಲಿ ಅದೇ ಪರಮಾತ್ಮನಿಗೆ (ಪರಶುರಾಮನಿಗೆ) ಮತ್ತು ಭೋಜನಕ್ಕೆ ಆಹ್ವಾನಿಸಿದ ಬ್ರಾಹ್ಮಣರು ಅತಿಥಿಗಳಲ್ಲಿರುವ ಶ್ರೀಹರಿಗೆ ಅನ್ನವನ್ನು ಸಮರ್ಪಿಸಿದಲ್ಲಿ ಅದು ಉಚ್ಛಿಷ್ಟ ಸಮರ್ಪಣೆಯಾಗಲಾರದೇ ?

ಈ ಬಗ್ಗೆ ಪಂಚರಾತ್ರಾಗಮ ಹೀಗೆ ಉತ್ತರಿಸಿದೆ -

ಯಥಾಗ್ನೌ ಸಂಸ್ಕೃತಾಜ್ಯಂ ವಾ ಅಗ್ನಾವೇವ ಹಿ ಹೂಯತೇ ।
ಮದರ್ಪಿತಂ ಪ್ರಗೃಹ್ಣಾಮಿ ಯಜ್ಞಹೋಮದ್ವಿಜಾದಿಷು ।।

ಅಗ್ನಿಯಲ್ಲಿ ಸಂಸ್ಕಾರ ಮಾಡಿದ ತುಪ್ಪವನ್ನು ಪುನಃ ಮಂತ್ರ ವಿಶೇಷಗಳಿಂದ ಅಗ್ನಿಯಲ್ಲಿ ಹೋಮಿಸುವುದು ಹೇಗೆ ಉಚ್ಛಿಷ್ಟವೆನಿಸುವುದಿಲ್ಲವೋ ಅದರಂತೆಯೇ ಮೊದಲು ನಿವೇದಿತವಾದರೂ ಅಗ್ನಿ - ಬ್ರಾಹ್ಮಣ - ಅತಿಥಿ ಮೊದಲಾದ ಪ್ರತೀಕಗಳಲ್ಲಿ ಅರ್ಪಿಸುವುದು ವಿಹಿತವಾಗಿದ್ದು ಉಚ್ಛಿಷ್ಟವೆನಿಸುವುದಿಲ್ಲ.

ಏಕಾದಶಿ ನೈವೇದ್ಯ ಸಮರ್ಪಣೆ ಇಲ್ಲ

ಶ್ರೀಹರಿಗೆ ಏಕಾದಶಿಯಂದು ನೈವೇದ್ಯ ಸಮರ್ಪಿಸಿದಲ್ಲಿ ಏಕಾದಶೀ ವ್ರತವು ನಿಷ್ಫಲವಾಗುವುದು. ಅಂದು ಅನ್ನವನ್ನಾಗಲೀ ಕಂದ - ಮೂಲ -ಫಲಗಳನ್ನಾಗಲೀ ನೀರನ್ನಾಗಲೀ ಸಮರ್ಪಿಸಿದಲ್ಲಿ ಶಲ್ಯದಿಂದ ಪರಮಾತ್ಮನಿಗೆ ಪ್ರಹರಿಸಿದ ಪಾಪ ಉಂಟಾಗುತ್ತದೆ. ಜಲಾದಿ ವಸ್ತುಗಳನ್ನು ಸಮರ್ಪಿಸಿದಲ್ಲಿ ಮಲ - ಮೂತ್ರ ಸಮರ್ಪಣೆ ಮಾಡಿದಂತಾಗುವುದು -

'ಏಕಾದಶೀವ್ರತಂ ನಶ್ಯೇತ್ ನೈವೇದ್ಯಸ್ಯಾರ್ಪಣಾನ್ಮಮ ।
ಅನ್ನಂ ವಾ ಫಲಮೂಲಂ ವಾ ಜಲಂ ವಾ ಮೇ ಪ್ರಯಚ್ಛತಿ ।
ಪೂಜಾಕಾಲೇ ಮಮ ದಿನೇ ಹೃದಿ ಶಲ್ಯಂ ತದರ್ಪಿತಮ್ ।।

। ಇತಿ ವಾರಾಹೇ ।

ಏಕಾದಶಿ ದಿನೇ ದೇವಿ ಜಲಸ್ನಾನಾದಿಸಮರ್ಪಣಮ್ ।
ಮೂತ್ರವಿಟ್ ಸಮಮೇವ ಸ್ಯಾತ್ ಇತ್ಯುಕ್ತಂ ಬ್ರಹ್ಮಣಾ ಪುರಾ।।'

ಇದು ಶ್ರೀನಿವಾಸ ತೀರ್ಥರು ಮಾಡಿದ ನಿರ್ಣಯ. ಮತ್ತೆ ಕೆಲವರು ಸ್ವಯಂ - ವ್ಯಕ್ತಪ್ರತಿಮೆಗಳಲ್ಲಿ ನೈವೇದ್ಯ ಸಮರ್ಪಣೆ ಮಾಡಬಹುದೆಂದು ನಿರ್ಣಯಿಸಿದ್ದಾರೆ. ।। ೧೨ ।।

ಭುಕ್ತಶೇಷಂ ಭಗವತೋ ಭೃತ್ಯಾತಿಥಿಪುರಸ್ಸರಃ ।
ಭುಂಜೀತ ಹೃದ್ಗತಂ ವಿಷ್ಣುಂ ಸ್ಮರಂಸ್ತದ್ಗತಮಾನಸಃ ।
ಆಚಮ್ಯ ಮೂಲಮಂತ್ರೇಣ ಕೋಷ್ಠಂ ಸಮಭಿಮಂತ್ರಯೇತ್ ।। ೧೩ ।।

ಪರಮಾತ್ಮನಿಗೆ ನಿವೇದಿತವಾದ ಆಹಾರವನ್ನು ಪೋಷ್ಯರು ಮತ್ತು ಅತಿಥಿಗಳೇ ಮುಂತಾದವರಿಗೆ ನೀಡಿ ಹೃದ್ಗತನಾದ ಪರಮಾತ್ಮನನ್ನು ಸ್ಮರಿಸುತ್ತ ಅವನಲ್ಲೇ ಮನಸ್ಸನ್ನಿಟ್ಟು ಭೋಜನವನ್ನು ಮಾಡಬೇಕು. ಅನಂತರ ಆಚಮನ ಮಾಡಿ 'ಓಂ ನಮೋ ನಾರಾಯಣಾಯ' ಎಂಬ ಮೂಲಮಂತ್ರದಿಂದ ತನ್ನ ಹೊಕ್ಕಳಿನ ಭಾಗವನ್ನು ಅಭಿಮಂತ್ರಿಸಬೇಕು.

'ಸ್ಮರಂಸ್ತದ್ಗತಮಾನಸಃ' ಎನ್ನುವ ಬದಲು 'ಸ್ಮರಂಸ್ತದ್ಯೋಗ ಮಾನಸ' ಎಂದು ಹೃಷೀಕೇಶತೀರ್ಥೀಯ ಪಾಠ.

ವಿವರಣೆ - ಭೋಜನ ಕ್ರಮವನ್ನು ಆಚಾರ್ಯರು ಇಲ್ಲಿ ನಿರೂಪಿಸುತ್ತಿದ್ದಾರೆ.

ಪೋಷ್ಯವರ್ಗ - ಅತಿಥಿ

ಭೃತ್ಯರೊಂದಿಗೆ ಅತಿಥಿಗಳೊಂದಿಗೆ ಭೋಜನ ಮಾಡಬೇಕು. 'ಭೃತ್ಯ'ರೆಂದರೆ ಪೋಷಣೆಗೆ ಯೋಗ್ಯರಾದವರು ಎಂದು ಅರ್ಥ. ವೃದ್ಧರಾದ ತಾಯಿ ತಂದೆಗಳು ಮಕ್ಕಳು ಅಣ್ಣ-ತಮ್ಮಂದಿರು ಬಾಂಧವರು ಸೇವಕರು ದುರ್ಬಲರು ಇವರೆಲ್ಲ ಪೋಷಣೆಗೆ ಅರ್ಹರೆನಿಸಿದ್ದಾರೆ. ಬಹಳ ದೂರದಿಂದ ಬಂದವ, ಬಳಲಿದವ, ವೈಶ್ವದೇವಕಾಲದಲ್ಲಿ ಬಂದವ 'ಅತಿಥಿ'ಯೆನಿಸುತ್ತಾನೆ. ಇವರನ್ನು ಸರಿಯಾಗಿ ಉಪಚರಿಸದಿರುವಲ್ಲಿ ಅವರ ಪಾಪವು ನಮಗೆ ದೊರಕಿ ನಮ್ಮ ಪುಣ್ಯವು ಅವರಿಗೆ ಸೇರುತ್ತದೆ.

ಅಥವಾ ನಮ್ಮ ನಡವಳಿಕೆಯಿಂದ ನೊಂದು ಅತಿಥಿಯು ನಮ್ಮ ಮನೆಯಿಂದ ತೆರಳಿದಲ್ಲಿ ನಮ್ಮನ್ನು 'ಅತಿಥಿ'ಯನ್ನಾಗಿಸುತ್ತಾನೆ, ಆಯುರ್ಹ್ರಾಸ - ವುಳ್ಳವರನ್ನಾಗಿಸುತ್ತಾನೆ.

ಮಂಡಲದ ಮೇಲೆ ಎಲೆ ಹಾಕಿ ಭೋಜನ ಮಾಡಬೇಕು

ಭೋಜನಕ್ಕೆ ಕುಳಿತುಕೊಳ್ಳುವಾಗ ಎಲೆಯನ್ನು, ಭೋಜನ ಪಾತ್ರೆಯನ್ನು ಇಡುವ ಸ್ಥಳದಲ್ಲಿ ಚತುರಸ್ರಮಂಡಲ (ಚಚ್ಚೌಕಾಕಾರದ ಮಂಡಲ) ಮಾಡಿಸಬೇಕು. ಆ ಮಂಡಲದಲ್ಲಿ ಬ್ರಹ್ಮಾದಿ ದೇವತೆಗಳ ಮತ್ತು ವಸಿಷ್ಠಾದಿ ಋಷಿಗಳ ಸನ್ನಿಧಾನವಿರುತ್ತದೆ. ಮಂಡಲ ಮಾಡದೆಯೇ ಪಾತ್ರೆ ಅಥವಾ ಎಲೆಯಲ್ಲಿ ಭೋಜನ ಮಾಡಿದಲ್ಲಿ ಆ ಅನ್ನದ ಸಾರವನ್ನು ದೈತ್ಯರು ಅಪಹರಿಸುತ್ತಾರೆ -

ಬ್ರಹ್ಮಾದ್ಯಾಶ್ಚ ಸುರಾಸ್ಸರ್ವೇ ವಸಿಷ್ಠಾದ್ಯಾ ಮಹರ್ಷಯಃ ।
ಮಂಡಲಂ ಚೋಪಜೀವಂತಿ ತತಃ ಕುರ್ವೀತ ಮಂಡಲಮ್ ।।
ಯಾತುಧಾನಾಃ ಪಿಶಾಚಾಶ್ಚ ರಾಕ್ಷಸಾಃ ಕ್ರೂರಕರ್ಮಿಣಃ ।
ಹರಂತಿ ರಸಮನ್ನಸ್ಯ ಮಂಡಲೇನ ವಿವರ್ಜಿತಮ್ ।।

ದಿಙ್ ನಿಯಮ

ಭೋಜನವನ್ನು ಪೂರ್ವ - ಪಶ್ಚಿಮ - ಉತ್ತರಾಭಿಮುಖವಾಗಿ ಮಾಡಬೇಕು. ದಕ್ಷಿಣಾಭಿಮುಖವಾಗಿ ಮಾಡಬಾರದು.

ಭೋಜನ ಯಜ್ಞ

ಗಾಯತ್ರೀಮಂತ್ರ-ನಾರಾಯಣಾಷ್ಟಾಕ್ಷರಮಂತ್ರವನ್ನು ಪಠಿಸುತ್ತ ಅನ್ನಾದಿಪದಾರ್ಥಗಳ ಮೇಲೆ ತೀರ್ಥವನ್ನು ಸಿಂಪಡಿಸಬೇಕು. ಅನಂತರ 'ಸತ್ಯಂ ತ್ವರ್ತೇನ ಪರಿಷಿಂಚಾಮಿ' ಎಂಬುದಾಗಿ ಪರಿಷೇಚನ ಮಾಡಬೇಕು. ಅನಂತರ 'ಚಿತ್ರಾಯ ನಮಃ ಚಿತ್ರಗುಪ್ತಾಯ ನಮಃ ಯಮಧರ್ಮರಾಜಾಯ ನಮಃ' ಎಂಬುದಾಗಿ ಮೂರು, ಸೆಲ್ಲಿಕಾಯಿ ಗಾತ್ರದ ಆಹುತಿಯನ್ನು ಇಟ್ಟು ಕೈ ತೊಳೆಯಬೇಕು. ಅನಂತರ ಅವರನ್ನು ಆ ಸ್ಥಾನದಿಂದ ವಿಸರ್ಜಿಸಬೇಕು. 'ಅಂತಶ್ಚರತಿ' ಇತ್ಯಾದಿ ಮಂತ್ರದಿಂದ ಅನ್ನವನ್ನು ಅಭಿಮಂತ್ರಿಸಬೇಕು. ವಿಷ್ಣುಪಾದೋದಕದಿಂದ 'ಅಮೃತೋಪಸ್ತರಣಮಸಿ ಸ್ವಾಹಾ' ಎಂಬುದಾಗಿ ತೀರ್ಥವನ್ನು ಸ್ವೀಕರಿಸಬೇಕು. 'ಓಂ ಪ್ರಾಣಾಯ ಸ್ವಾಹಾ' ಇತ್ಯಾದಿ ಮಂತ್ರಗಳಿಂದ ಐದು ಆಹುತಿಗಳನ್ನು ಸ್ವೀಕರಿಸಬೇಕು. ಭೋಜನ ಮುಗಿದ ಮೇಲೆ 'ಅಮೃತಾಪಿಧಾನಮಸಿ' ಎಂಬುದಾಗಿ ಉತ್ತರಾಪೋಶನ ತೆಗೆದುಕೊಳ್ಳಬೇಕು. ಭೋಜನಾನಂತರ ಆಚಮನ ಮಾಡಿ ಪುನಃ ತೀರ್ಥವನ್ನು ತೆಗೆದುಕೊಳ್ಳಬೇಕು-

ಗಾಯತ್ರ್ಯಾ ಮೂಲಮಂತ್ರೇಣ ಪ್ರೋಕ್ಷಯೇತ್ತೀರ್ಥವಾರಿಣಾ ।
ಸತ್ಯಂ ತ್ವರ್ತೇತಿ ಮಂತ್ರೇಣ ಪರಿಷೇಚನಮಾಚರೇತ್ ।
ಚಿತ್ರಾಯ ಚಿತ್ರಗುಪ್ತಾಯ ಧರ್ಮರಾಜಾಯ ವೈ ಬಲಿಮ್ ।।
ಸ್ವಸ್ಯೈವ ದಕ್ಷಿಣೇ ಭಾಗೇ ದತ್ವಾ ಪ್ರಕ್ಷಾಲಯೇತ್ ಕರಮ್ ।
ಚಿತ್ರಾಹುತಿಪ್ರದಾನೇ ತು ಸ್ವಾಹಾಕಾರಂ ತು ವರ್ಜಯೇತ್ ।
ನಮಃ ಶಬ್ದೈಸ್ತು ಕರ್ತವ್ಯಂ ತತ್ತತ್ ಸ್ಥಾನಾತ್ ವಿಸರ್ಜಯೇತ್ ।।

ಅನುಸಂಧಾನ

ಸಂಕರ್ಷಣ ಪ್ರದ್ಯುಮ್ನರು ಭೋಕ್ತೃಗಳಲ್ಲಿ ಇದ್ದು ಊಟ ಮಾಡುವವನಿಗೆ ಅಂತರ್ನಿಯಾಮಕರೆಂದು ಮತ್ತು ಅವರೇ ಸಾಕ್ಷಾತ್ ಭೋಕ್ತೃಗಳೆಂದೂ ಚಿಂತಿಸಬೇಕು.

ನಾರಾಯಣ - ಅನಿರುದ್ಧರು ಊಟ ಮಾಡುವ ಪದಾರ್ಥಗಳಲ್ಲಿದ್ದು ಭೋಜನದಿಂದ ತೃಪ್ತಿ ನೀಡುವರೆಂದೂ, ಭೋಜ್ಯ ವಸ್ತುಗಳಿಗೆ ಉದರದಲ್ಲಿ ಅವಕಾಶ ನೀಡಲು ವಾಸುದೇವನು ಸನ್ನಿಹಿತನಾಗಿರುವನೆಂದು ಚಿಂತಿಸಿ ಪರಮಾತ್ಮನನ್ನು ಧ್ಯಾನಿಸುತ್ತ ಭೋಜನ ಮಾಡಬೇಕು. ಆಗ ಈ ಕರ್ಮವು 'ಯಜ್ಞ'ವೆನಿಸುತ್ತದೆ.

'ಅಮೃತೋಪಸ್ತರಣಮಸಿ - ಅಮೃತಾಪಿಧಾನಮಸಿ' ಎಂಬ ಎರಡು ಆಪೋಶನಗಳನ್ನು ತೆಗೆದುಕೊಳ್ಳುವಾಗ, ಈ ಆಪೋಶನಗಳು, ಉದರದಲ್ಲಿರುವ ಮುಖ್ಯಪ್ರಾಣನಿಗೆ 'ವಸ್ತ್ರಸಮರ್ಪಣ' ರೂಪವಾಗಿವೆ ಎಂಬ ಅನುಸಂಧಾನ ಮಾಡಿಕೊಳ್ಳಬೇಕು.

### ಊಟ ಮಾಡುವ ಪದ್ಧತಿ

ಬೆರಳುಗಳಿಂದ ಭೋಜನ ಮಾಡಬೇಕು. ಅಂಗೈ ಮೂಲದವರೆಗೆ ಅನ್ನ ಸಾರು ಮುಂತಾದ ವಸ್ತುಗಳನ್ನು ತಂದು ಭುಂಜಿಸಬಾರದು. ಊಟ ಮಾಡುವಾಗ ಇತರರಿಗೆ ಅಸಹ್ಯವಾಗುವಂತೆ, ಸಾರು ಪಾಯಸ ಮುಂತಾದ ವಸ್ತುಗಳನ್ನು ಶಬ್ದ ಮಾಡುತ್ತ ಸುರಿಯಬಾರದು. ತುತ್ತಿನ ಅರ್ಧವನ್ನು ತಿಂದು ಪುನಃ ಅದರ ಶೇಷವನ್ನು ತಿನ್ನಬಾರದು. ಯಾವುದೇ ಖಾದ್ಯವಸ್ತುಗಳನ್ನು ತರಕಾರಿ ಮುಂತಾದವನ್ನು ಸ್ವಲ್ಪ ಸ್ವಲ್ಪ ಕಚ್ಚಿ ತಿನ್ನಬಾರದು. ಒಂದು ಬಾರಿಗೆ ಅಗೆಯಲು ಸೌಕರ್ಯವಾಗುವಂತೆ ಅವುಗಳನ್ನು ಸಣ್ಣ ತುಂಡುಗಳಾಗಿ ಮಾಡಿ ಬಾಯಲ್ಲಿ ಜಗಿದು ತಿಂದು ಇನ್ನೊಂದು ಭಾಗವನ್ನು ತಿನ್ನಬೇಕು.

ನೀರನ್ನು ಸ್ವಲ್ಪ ಕುಡಿದು ಪುನಃ ಅದೇ ನೀರನ್ನು ಕುಡಿಯಬಾರದು. ಒಂದು ಬಾರಿಗೆ ಕುಡಿಯಲು ಅಗತ್ಯವಿರುವ ನೀರನ್ನು ಮಾತ್ರವೇ ಉಪಪಾತ್ರದಲ್ಲಿ ಹಾಕಿಕೊಂಡು ಕುಡಿಯಬೇಕು. ಈ ಎಲ್ಲಾ ನಿಯಮಗಳನ್ನೂ ಮೀರಿ ಸ್ವಚ್ಛಂದವಾಗಿ ಭೋಜನ ಮಾಡಿದಲ್ಲಿ ಆ ವ್ಯಕ್ತಿಯು ಗೋಮಾಂಸಭಕ್ಷಣ-ಮದ್ಯಪಾನದ ಫಲವನ್ನು ಪಡೆಯುತ್ತಾನೆ -

ಯಸ್ತು ಪಾಣಿತಲೇ ಭುಂಕ್ತೇ ಯಚ್ಚ ಫೂತ್ಕಾರಸಂಯುತಮ್ ।
ಪ್ರಸೃತಾಂಗುಲಿಭಿರ್ಯಚ್ಚ ತಸ್ಯ ಗೋಮಾಂಸವಚ್ಚ ತತ್ ॥
ಗ್ರಾಸಶೇಷಂ ನ ಚಾಶ್ನೀಯಾತ್ ಪೀತಶೇಷಂ ಪಿಬೇನ್ನ ಚ ।
ಶಶ್ಚನ್ಮೂಲಫಲಾದೀನಿ ದಂತಚ್ಛಿನ್ನಂ ನ ಖಾದಯೇತ್ ॥

### ಸ್ವೀಕಾರಾರ್ಹವಲ್ಲದ ಅನ್ನ

ಯತಿಗಳಿಂದ ಪ್ರದತ್ತವಾದ ಅಥವಾ ಅವರ ಭೋಜನ ಪಾತ್ರದಲ್ಲಿ - ಉಳಿದದನ್ನು, ಯತಿಗಳ ಭೋಜನದಿಂದ ಉಳಿದುದನ್ನು, ಯತಿಗಳು ಊಟ ಮಾಡಿ

ಉಳಿದ ಅನ್ನವನ್ನು ಭೋಜನ ಮಾಡಿದಲ್ಲಿ ಪ್ರಾಯಶ್ಚಿತ್ತ ರೂಪವಾಗಿ

ಚಾಂದ್ರಾಯಣವ್ರತವನ್ನು ಮಾಡಬೇಕು.

"ಅವೈಷ್ಣವರ ಅನ್ನ, ಯತಿಗಳಿಂದ ಕೊಡಲ್ಪಟ್ಟ ಅನ್ನ, ಪತಿತಾನ್ನ, ವಿಷ್ಣುವಿಗೆ ಅರ್ಪಿತವಲ್ಲದ ಅನ್ನವು, ನಾಯಿಯ ಮಾಂಸಕ್ಕೆ ಸದೃಶವೆನಿಸಿದೆ"-

ಯತ್ಯನ್ನಂ ಯತಿಪಾತ್ರಸ್ಥಂ ಯತಿನಾ ಪ್ರೇರಿತಂ ತಥಾ ।
ದಂಪತ್ಯೋರ್ಭುಕ್ತಶಿಷ್ಟಾನ್ನಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ।।
ಅವೈಷ್ಣವಾನ್ನಂ ಯತ್ಯನ್ನಂ ಪತಿತಾನ್ನಂ ತಥೈವ ಚ ।
ಅನರ್ಪಿತಂ ತು ಯಚ್ಚಾನ್ನಂ ಶ್ವಮಾಂಸಸದೃಶಂ ಭವೇತ್ ।।

(ಪಾದ್ಮ) ।। ೧೩ ।।

ವೇದಶಾಸ್ತ್ರ ವಿನೋದೇನ ಪ್ರೀಣಯನ್ ಪುರುಷೋತ್ತಮಮ್ ।
ಅಹಃ ಶೇಷಂ ನಯೇತ್ ಸಂಧ್ಯಾಮುಪಾಸೀತಾಽಥ ಪೂರ್ವವತ್ ।।೧೪।

ವೇದ - ಬ್ರಹ್ಮಮೀಮಾಂಸಾಶಾಸ್ತ್ರ ಪುರಾಣಗಳ ಪಾಠ-ಪ್ರವಚನ-ವಿಮರ್ಶೆಯೊಂದಿಗೆ ಕ್ಷರಾಕ್ಷರಗಳಿಗಿಂತ ಉತ್ತಮನಾದ ಶ್ರೀಹರಿಯನ್ನು ಸಂತೋಷ ಪಡಿಸುತ್ತ ಹಗಲನ್ನು ಕಳೆದು ಸೂರ್ಯಾಸ್ತಕ್ಕಿಂತ ಮೊದಲು ವಿಧ್ಯುಕ್ತವಾದ ರೀತಿಯಲ್ಲಿ ಸಂಧ್ಯಾವಂದನೆ ಮಾಡಬೇಕು.

ವಿವರಣೆ - ಮಧ್ಯಾಹ್ನ ಭೋಜನಾನಂತರದ ಕರ್ತವ್ಯವನ್ನು ಭಗವತ್ಪಾದರು ಇಲ್ಲಿ ನಿರೂಪಿಸುತ್ತಿದ್ದಾರೆ. ಶ್ರವಣ - ಮನನಾದಿಗಳನ್ನು ತೊರೆದು ಕ್ಷಣಕಾಲವೂ ವ್ಯರ್ಥವಾಗಿ ಕಾಲ ಕಳೆಯಬಾರದು. ದೇವತೆಗಳೂ ಸದಾಕಾಲ ಶ್ರವಣ - ಮನನಾದಿ ಸತ್ಕರ್ಮಗಳನ್ನು ಮಾಡುವರೆಂದಮೇಲೆ ಮನುಷ್ಯರು ಇದನ್ನು ಮಾಡಬೇಕೆಂದು ಹೇಳುವುದೇನಿದೆ ? ರಾತ್ರಿ ಅನಿವಾರ್ಯವಾದಷ್ಟು ನಿದ್ರೆ ಮಾಡಬೇಕು. ಹಗಲು ನಿದ್ರೆ ಆಯುಷ್ಯವನ್ನು ಕಡಿಮೆ ಮಾಡುತ್ತದೆ. ಹಗಲಿನಲ್ಲಿ ಸ್ತ್ರೀ ಸಂಪರ್ಕ, ಪುಣ್ಯವನ್ನು ನಾಶ ಮಾಡುತ್ತದೆ. ವ್ಯರ್ಥವಿವಾದ, ಪರನಿಂದೆ ಮುಂತಾದವನ್ನು ಯಾವಾಗಲೂ ಮಾಡಬಾರದು. -

ಆಯುಃಕ್ಷೀಣಾ ದಿವಾ ನಿದ್ರಾ ದಿವಾ ಸ್ತ್ರೀ ಪುಣ್ಯನಾಶಿನೀ ।
ವೃಥಾ ವಿವಾದವಾಕ್ಯಾನಿ ಪರೀವಾದಾನ್ ತಥಾ ತ್ಯಜೇತ್ ।।

ಸಾಯಂ ಸಂಧ್ಯಾ - ಔಪಾಸನಾ - ವೈಶ್ವದೇವಗಳು ಅವಶ್ಯ ಕರ್ತವ್ಯ

ಆಕಸ್ಮಿಕವಾಗಿ ಸುಳ್ಳು ಮಾತನಾಡಿದ, ಮದ್ಯ ಗಂಧ ಸೇವನೆಯ ಮತ್ತು ಹಗಲು ನಿದ್ರೆ - ಮೈಥುನ ದೋಷ - ಅಯೋಗ್ಯಾನ್ನ ಸ್ವೀಕಾರ ದೋಷಗಳನ್ನು - ಮನೆಯಿಂದ ಹೊರಗೆ ಆಚರಿಸಲ್ಪಟ್ಟ ಸಾಯಂ ಸಂಧ್ಯಾವಂದನೆಯು ಪರಿಹರಿಸುತ್ತದೆ.

ಮನೆಯಿಂದ ಹೊರಗೆ ತುಲಸೀ ಬೃಂದಾವನದ ಮುಂದೆ ಅಥವಾ ಸರೋವರ-ನದೀ ಮುಂತಾದ ಪವಿತ್ರ ಸ್ಥಾನಗಳಲ್ಲಿ ಸಾಯಂಸಂಧ್ಯಾವಂದನೆ ಮಾಡುವುದು ಮನೆಯಲ್ಲಿ ಮಾಡುವುದಕ್ಕಿಂತ ನೂರುಪಟ್ಟು ಹೆಚ್ಚಿನ ಫಲವನ್ನು ನೀಡುತ್ತದೆ. ಗಂಗಾ ಸನ್ನಿಧಾನದಲ್ಲಿ ಮಾಡುವುದು ಸಹಸ್ರಪಟ್ಟು ಫಲವನ್ನು ನೀಡುತ್ತದೆ -

ಅನೃತಂ ಮದ್ಯಗಂಧಂ ಚ ದಿವಾಸ್ವಾಪಂ ಚ ಮೈಥುನಮ್ ।
ಪುನಾತಿ ವೃಷಲಸ್ಯಾನ್ನಂ ಸಾಯಂ ಸಂಧ್ಯಾ ಬಹಿಃ ಕೃತಾ ।।
ಬಹಿಃ ಸಂಧ್ಯಾ ಶತಗುಣಾ ಗರ್ತಪ್ರಸ್ರವಣಾದಿಷು ।
ತೀರ್ಥೇ ಶತಗುಣಂ ಜ್ಞೇಯಂ ಸಹಸ್ರಂ ಜಾಹ್ನವೀಜಲೇ ।।

ಅನಂತರ ವಿಧ್ಯುಕ್ತ ಕ್ರಮದಿಂದ ಔಪಾಸನಹೋಮ-ದೇವಪೂಜೆ-ವೈಶ್ವದೇವಗಳನ್ನು ಮಾಡಿ ರಾತ್ರಿ ಭೋಜನ ಮಾಡಬೇಕು -

ಸಾಯಮೌಪಾಸನಂ ಹುತ್ವಾ ಪಶ್ಚಾದ್ಧೋಮಂ ಸಮಾಚರೇತ್ ।
ಅತಂದ್ರಿತೋ ಹರಿಂ ಧ್ಯಾಯನ್ ವೈಶ್ವದೇವಂ ಸಮಾಚರೇತ್ ।।

**ಸಾಯಂಕಾಲ ಭೋಜನದಲ್ಲಿ ದಿಕ್ ನಿಯಮ**

ಆಯುಷ್ಯವನ್ನು ಬಯಸುವವನು ರಾತ್ರಿ ಪೂರ್ವಾಭಿಮುಖನಾಗಿಯೂ, ಯಶಸ್ಸನ್ನು ಬಯಸುವವನು ದಕ್ಷಿಣಾಭಿಮುಖನಾಗಿಯೂ, ಸಂಪತ್ತಿನಿಂದು ಪಶ್ಚಿಮಾಭಿಮುಖನಾಗಿಯೂ ಭೋಜನಮಾಡಬೇಕು. ದಕ್ಷಿಣ ದಿಕ್ಕಿಗೆ ಅಭಿಮುಖನಾಗಿ ಭೋಜನ ಮಾಡಬಾರದೆಂಬ ಧರ್ಮಶಾಸ್ತ್ರ ವಾಕ್ಯಗಳು, ಜೀವನ್ಮಾತೃಕನಾದ ವ್ಯಕ್ತಿಯ ಹಗಲಿನ ಭೋಜನಕ್ಕೆ ಸಂಬಂಧಿಸಿವೆ. ।।೧೪।।

ಯಮಾತ್ಪರತ ಏವಾಥ ಸ್ವಪೇದ್ ಧ್ಯಾಯನ್ ಜನಾರ್ದನಮ್ ।
ಅಂತರಾಲೇ ತತೋ ಬುದ್ಧ್ವಾ ಸ್ಮರೇತ ಬಹುಶೋ ಹರಿಮ್ ।। ೧೫ ।।

ರಾತ್ರಿ ಒಂದು ಯಾಮದ ನಂತರ ಜನಾರ್ದನನನ್ನು ಧ್ಯಾನಿಸುತ್ತ ಮಲಗಬೇಕು. ನಿದ್ರೆಯ ಮಧ್ಯದಲ್ಲಿ ಎಚ್ಚರವಾದಾಗಲೂ ಅನೇಕ ಬಾರಿ ಮತ್ಸ್ಯಾದ್ಯನೇಕರೂಪನಾದ ಶ್ರೀಹರಿಯನ್ನು ಸ್ಮರಿಸಬೇಕು.

ವಿವರಣೆ - ರಾತ್ರಿ ಸುಮಾರು ಒಂಭತ್ತು ಘಂಟೆಯ ನಂತರ, ಕೈ ಕಾಲನ್ನು ತೊಳೆದುಕೊಂಡು ವಿಶ್ವಾದಿ ರೂಪನಾದ ಶ್ರೀಹರಿಯನ್ನು ಚಿಂತಿಸುತ್ತ, ರಾತ್ರಿ ಸೂಕ್ತ ಪಠಿಸಿ, ಗುರುಗಳನ್ನು ವಂದಿಸಿ, ಅಗಸ್ತ್ಯ-ಶಂಭು-ಮುಚುಕುಂದ-ಕಪಿಲ-ಆಸ್ತೀಕರನ್ನು ಸ್ಮರಿಸಿ ನಿದ್ರೆ ಮಾಡಬೇಕು -

ಅಗಸ್ತ್ಯೋ ಮಾಧವಶ್ಚೈವ ಮುಚುಕುಂದೋ ಮಹಾಮುನಿಃ ।
ಕಪಿಲೋ ಮುನಿರಾಸ್ತೀಕಃ ಪಂಚೈತೇ ಸುಖಶಾಯಿನಃ ।।

ಯಾವ ದಿಕ್ಕಿಗೆ ತಲೆ ?

ಪೂರ್ವದಿಕ್ಕಿಗೆ ತಲೆ ಮಾಡಿ ಮಲಗುವವನು ವಿದ್ಯೆಯನ್ನು, ದಕ್ಷಿಣ ದಿಕ್ಕಿಗೆ ತಲೆ ಇಟ್ಟು ಮಲಗುವವನು ಧರ್ಮ ಮತ್ತು ಆಯುಷ್ಯವನ್ನು, ಪಶ್ಚಿಮ ದಿಕ್ಕಿಗೆ ಮಲಗುವವನು ಪ್ರಬಲಚಿಂತೆಯನ್ನು ಉತ್ತರ ದಿಕ್ಕಿಗೆ ತಲೆ ಹಾಕಿ ಮಲಗುವವನು ಹಾನಿ ಮತ್ತು ಮೃತ್ಯುವನ್ನು ಪಡೆಯುವನು.

ವ್ಯವಾಯ ಯಜ್ಞ

'ಅಂತರಾಲೇ ತತೋ ಬುಧ್ವಾ' ಎಂಬ ವಾಕ್ಯವನ್ನು ಹೀಗೂ ವ್ಯಾಖ್ಯಾನಿಸಲಾಗಿದೆ - ತತಃ - ಹಾಸಿಗೆಯಲ್ಲಿ ಮಲಗಿದ ಮೇಲೆ, ಅಂತರಾಲೇ - ತನ್ನಲ್ಲಿ ಮತ್ತು ತನ್ನ ಮಡದಿಯಲ್ಲಿ ವಾಯುಭಾರತಿಯರನ್ನು ಅವರೊಳಗೆ ರಮಾನಾರಾಯಣರನ್ನು ಚಿಂತಿಸಿ, ಅವರೇ ನಮ್ಮ ದೇಹದಲ್ಲಿ ಭೋಗ ಮಾಡುತ್ತಿರುವರೆಂಬ ಅನುಸಂಧಾನದೊಂದಿಗೆ ಸ್ತ್ರೀ ಸಂಗವನ್ನು ಮಾಡಬೇಕು. ಆಗ ಈ ಕರ್ಮವು 'ವ್ಯವಾಯಯಜ್ಞ' ವೆನಿಸುತ್ತದೆ. ।·। ೧೫ ।।

ಕಾಯೇನ ವಾಚಾ ಮನಸೇಂದ್ರಿಯೈರ್ವಾ
 ಬುದ್ಧ್ಯಾಽತ್ಮನಾ ವಾಽನುಸ್ಮೃತಃ ಸ್ವಭಾವಮ್ ।
ಕರೋತಿ ಯದ್ಯತ್ ಸಕಲಂ ಪರಸ್ಮೈ
 ನಾರಾಯಣಾಯೇತಿ ಸಮರ್ಪಯೇತ್ತತ್ ।।೧೬।।

ದೇಹ - ವಾಗಿಂದ್ರಿಯ - ಮನಸ್ಸು - ಇತರ ಇಂದ್ರಿಯಗಳು - ನಿರ್ಣಯಾತ್ಮಕವಾದ ಬುದ್ಧಿ ಇವುಗಳಿಂದ ಅಥವಾ ಸ್ವಭಾವಕ್ಕೆ ಅನುಗುಣವಾಗಿ ಪರಮಾತ್ಮನಿಂದ ಪ್ರೇರಿತನಾಗಿ ಜೀವಿಯು ಯಾವ ಕಾರ್ಯವನ್ನು ಮಾಡುವನೋ ಅವೆಲ್ಲವನ್ನು ಸರ್ವೋತ್ತಮನಾದ ನಾರಾಯಣನಿಗೆ ಸಮರ್ಪಿಸಬೇಕು.

ಇಲ್ಲಿ 'ಅನುಸ್ಮೃತಸ್ವಭಾವಃ' ಎಂದು ಹೃಷೀಕೇಶತೀರ್ಥೀಯ ಪಾಠ.

ವಿವರಣೆ - 'ಯಸ್ಮಿನ್ ಸರ್ವಾಣಿ ಕರ್ಮಾಣಿ' ಎಂಬುದಾಗಿ ಪ್ರಾರಂಭಿಸಿ, ಬೆಳಗು ಜಾವ ಏಳುವಲ್ಲಿಂದ ರಾತ್ರಿ ಮಲಗುವವರೆಗೆ ಮಾಡುವ ಎಲ್ಲಾ ಕಾರ್ಯಗಳನ್ನು ಶ್ರೀಹರಿಗೆ ಸಮರ್ಪಿಸಬೇಕೆಂದು ಈ ತನಕ ನಿರೂಪಿಸಲಾಯಿತು. ಈ ವಿಷಯದಲ್ಲಿ ಶ್ರೀ ವೇದವ್ಯಾಸದೇವರ ಶ್ರೀಮದ್ ಭಾಗವತದ (೧೧.೨.೩೬.) ವಾಕ್ಯವನ್ನೇ ಪ್ರಮಾಣವಾಗಿ ಶ್ರೀಮದಾಚಾರ್ಯರು ಇಲ್ಲಿ ಉಲ್ಲೇಖಿಸಿದ್ದಾರೆ. ।। ೧೬ ।।

"ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ।। ೧೭ ।।
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।

ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ।। ೧೮ ।।
ಯಸ್ಮಾತ್ ಕ್ಷರಮತೀತೋಽಹಂ ಅಕ್ಷರಾದಪಿ ಚೋತ್ತಮಃ ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ।। ೧೯ ।।
ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ ।
ಸ ಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ।। ೨೦ ।।
ಇತಿ ಗುಹ್ಯತಮಂ ಶಾಸ್ತ್ರಂ ಇದಮುಕ್ತಂ ಮಯಾಽನಘ ।
ಏತದ್ ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ" ।। ೨೧ ।।

ನಿಯಮ್ಯರಾದ ಜೀವಸಮುದಾಯದಲ್ಲಿ ಕ್ಷರ ಮತ್ತು ಅಕ್ಷರ ಎಂಬುದಾಗಿ ಚೇತನರು ಎರಡು ತೆರನಾಗಿದ್ದಾರೆ. ಶರೀರನಾಶವನ್ನು ಹೊಂದುವ ಬ್ರಹ್ಮಾದಿ ದೇವತೆಗಳೆಲ್ಲ 'ಕ್ಷರ' ಎನಿಸಿದ್ದಾರೆ. ಅವಿಕಾರಿಯಾದ ನಿತ್ಯ ದೇಹವುಳ್ಳವಳಾದ ಕಾರಣ ರಮೆ, 'ಅಕ್ಷರ'ಳೆನಿಸಿದ್ದಾಳೆ.

ಕ್ಷರ-ಅಕ್ಷರಗಳಿಗಿಂತ ಭಿನ್ನನಾದವನು 'ಪರಮಾತ್ಮ' ಎಂಬುದಾಗಿ ವೇದಾದಿ ಶಾಸ್ತ್ರಗಳಲ್ಲಿ ಬಣ್ಣಿಸಲ್ಪಟ್ಟಿದ್ದಾನೆ. ಅವನು ಎಲ್ಲಾ ಲೋಕಗಳಲ್ಲೂ ವ್ಯಾಪ್ತನಾಗಿದ್ದು, ಎಲ್ಲ ವಿಶ್ವವನ್ನೂ ಧರಿಸಿ ಪೋಷಿಸುತ್ತಾನೆ. ಅವನಿಂದ ಆವಿಷ್ಟನಾದ ಈ ವಿಶ್ವಕ್ಕೆ ನಾಶ ಸಂಭವಿಸಿದರೂ, ಅವನು ಪರಮೈಶ್ವರ್ಯ ಸಂಪನ್ನನಾದುದರಿಂದ ಅವಿನಾಶಿಯಾಗಿ ಇದ್ದಾನೆ.

"ನಾನು (ಶ್ರೀಹರಿಯು) ಕ್ಷರತತ್ತ್ವವನ್ನು ಮೀರಿದವನು ಮತ್ತು ಅಕ್ಷರ ತತ್ತ್ವಾಭಿಮಾನಿನಿಯಾದ ರಮೆಗಿಂತ ಉತ್ತಮನು. ಆದುದರಿಂದ, ಪೌರುಷೇಯವಾದ ಪುರಾಣ ಆಗಮಗ್ರಂಥಗಳಲ್ಲಿ ಮತ್ತು ಅಪೌರುಷೇಯವಾದ ವೇದದಲ್ಲಿ ಪುರುಷೋತ್ತಮನೆಂದು ಪ್ರಸಿದ್ಧನಾಗಿರುವೆ.

ಎಲೋ ಅರ್ಜುನನೇ! ಯಾವ ಅಧಿಕಾರಿಯು ಈ ಮಹಿಮೆಯು ಪ್ರಾಮಾಣಿಕವೆಂದು ಅರಿತು ನನ್ನನ್ನು ಸರ್ವೋತ್ತಮನೆಂದು ಎಲ್ಲಾ ಪ್ರಕಾರಗಳಿಂದಲೂ ಉಪಾಸನೆ ಮಾಡುವನೋ ಅವನು ಸಕಲಶಾಸ್ತ್ರಗಳ ಸಾರವನ್ನು ಅರಿತವನು.

ಓ ಅರ್ಜುನನೇ! ಹೀಗೆ ಅತ್ಯಂತ ರಹಸ್ಯವಾದ ಪ್ರಮೇಯವು ನನ್ನಿಂದ ಹೇಳಲ್ಪಟ್ಟಿದೆ. ಇದನ್ನು ಅರಿತವನು ಅಪರೋಕ್ಷಜ್ಞಾನಿಯೂ ಮುಕ್ತನೂ ಆಗುವನು."

ವಿವರಣೆ - ಎಲ್ಲಾ ಕರ್ಮಗಳನ್ನು ಶ್ರೀಹರಿಗೆ ಸಮರ್ಪಿಸಬೇಕೆಂದು ನಿರೂಪಿಸಲಾಯಿತು. ಅನೇಕ ದೇವತೆಗಳಿರಲು ಶ್ರೀಹರಿಗೆ ಏಕೆ ಸಮರ್ಪಿಸಬೇಕು? ಎಂಬ ಪ್ರಶ್ನೆಗೆ ಉತ್ತರವನ್ನು ಇಲ್ಲಿ ನೀಡಲಾಗಿದೆ. ಶ್ರೀಹರಿಯು ಸರ್ವೋತ್ತಮ ದೇವತೆಯು. ಅವನೇ ಸಕಲಲೋಕಧಾರಕತ್ವ-ಪ್ರೇರಕತ್ವಾದಿ



ಮಹಾಮಾಹಾತ್ಮ್ಯವುಳ್ಳವನು. ಈ ಅಂಶವು ಸಕಲಶಾಸ್ತ್ರಸಿದ್ಧವೂ ಸಾರವೂ ಆಗಿದೆಯೆಂದು ತಿಳಿಸಲು ವೇದಕ್ಕಿಂತ ಉತ್ತಮವೂ ಭಾರತಸಾರವೂ ಆದ ಗೀತೆಯ

ಮಾತನ್ನು ಭಗವತ್ಪಾದರು ಇಲ್ಲಿ ಪ್ರಮಾಣವಾಗಿ ಉದಾಹರಿಸಿದ್ದಾರೆ.

ಭಕ್ತನೂ ಜಿಜ್ಞಾಸುವೂ ಆದ ಅರ್ಜುನನಿಗೆ ಯಥಾರ್ಥಜ್ಞಾನ ನೀಡುವುದಕ್ಕೋಸ್ಕರವೇ ಮಾಡಿದ ಈ ಉಪದೇಶವು ವಕ್ತ್ರಾದ್ಯಾನುಕೂಲ್ಯ ಹೊಂದಿದ್ದು ಪರಮಪ್ರಮಾಣವೆನಿಸಿದೆ. ಈ ಹಿನ್ನೆಲೆಯಲ್ಲಿ ಶ್ರೀಹರಿಗೆ ಸಕಲ ಕರ್ಮಗಳನ್ನು ಸಮರ್ಪಿಸಬೇಕೆಂಬ ಪ್ರಮೇಯವು ಪ್ರಾಮಾಣಿಕವೆಂದು ಸಿದ್ಧವಾಗುವುದು. ಇಲ್ಲಿ ಹೃಷೀಕೇಶತೀರ್ಥರ ಪಾಠ ಹೀಗಿದೆ -

ಯಸ್ಮಾತ್ ಕ್ಷರಮತೀತೋಽಸಾವಕ್ಷರಾಚ್ಚೋತ್ತಮೋ ಹರಿಃ ।
ಅತೋ ಹಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ।।
ಯಸ್ತ್ವೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।
ಸ ಸರ್ವವಿದ್ಭಜತಿ ತಂ ಸರ್ವಭಾವೇನ ಸರ್ವದಾ ।।
ಇತಿ ಗುಹ್ಯತಮಂ ಶಾಸ್ತ್ರಂ ಇದಂ ತೇನೋಕ್ತಮೇವ ಚ ।
ಏತದ್ ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ನಿತ್ಯದಾ ।।
।। ೧೭-೨೧ ।।

"ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ ।
ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಽಹಂ ಕಂಚಿದುಪಾಶ್ರಿತಃ" ।।೨೨।।

"ದೇವತೆಗಳು ತಮ್ಮ ಇಷ್ಟಾರ್ಥಸಿದ್ಧಿಗಾಗಿ ರುದ್ರದೇವರನ್ನು ಆಶ್ರಯಿಸಿದ್ದಾರೆ. ರುದ್ರದೇವರು ಚತುರ್ಮುಖನನ್ನು ಆಶ್ರಯಿಸಿದ್ದಾರೆ. ಚತುರ್ಮುಖಬ್ರಹ್ಮನಾದರೂ ಯಾವಾಗಲೂ ನನ್ನನ್ನು (ಶ್ರೀಹರಿಯನ್ನು) ಆಶ್ರಯಿಸಿರುವನು. ನಾನು ಯಾರನ್ನೂ ಆಶ್ರಯಿಸಿಲ್ಲ."

ವಿವರಣೆ - ಶ್ರೀಹರಿಯೇ ಸರ್ವೋತ್ತಮನೆಂದು ಪ್ರತಿಪಾದಿಸಲಾಯಿತು. ಆದರೆ, 'ಏಕೋ ರುದ್ರೋ ನ ದ್ವಿತೀಯಾಯ ತಸ್ಥೇ' ಎಂಬುದಾಗಿ ಶ್ರುತಿಯು ರುದ್ರನನ್ನು ಜಗದಾದಿ ಪುರುಷ ಮತ್ತು ಸರ್ವೋತ್ತಮನೆಂದು ಬಣ್ಣಿಸಿದೆ. ಆದ್ದರಿಂದ ನಾರಾಯಣನೇ ಸರ್ವೋತ್ತಮನಾಗುವುದು ಹೇಗೆ? ಎಂಬ ಆಶಂಕೆಗೆ ಶ್ರುತಿಯಲ್ಲಿರುವ ರುದ್ರ ಶಬ್ದವು ಸಾವಕಾಶವಾಗಿದ್ದು, ಸಂಸಾರರೋಗ ಪರಿಹಾರಕನಾದ ಸಕಲಶಬ್ದವಾಚ್ಯನಾದ ಶ್ರೀಹರಿಯನ್ನೇ ಪ್ರತಿಪಾದಿಸುತ್ತಿದೆಯಾದ್ದರಿಂದ ಯಾವ ವಿರೋಧವೂ ಇಲ್ಲವೆಂಬ ಹಿನ್ನೆಲೆಯೊಂದಿಗೆ ರುದ್ರಾದಿ ದೇವತೆಗಳೆಲ್ಲ ನಾರಾಯಣಾಶ್ರಿತರೆಂದು ಪ್ರತಿಪಾದಿಸುವ ಅತ್ಯಂತ ಸ್ಪಷ್ಟವಾದ ನಿರವಕಾಶವಾದ ಮಹಾಭಾರತದ ವಚನವನ್ನು ಆಚಾರ್ಯರು ಇಲ್ಲಿ ಪ್ರಮಾಣವಾಗಿ ಉದಾಹರಿಸಿದ್ದಾರೆ. ಈ ಶ್ಲೋಕದ ಉತ್ತರಾರ್ಧದ ಹೃಷೀಕೇಶತೀರ್ಥರ ಪಾಠ -

ಬ್ರಹ್ಮಾ ತಮಾಶ್ರಿತೋ ನಿತ್ಯಂ ನ ಹರಿಃ ಕಂಚಿದಾಶ್ರಿತಃ ।। ೨೨ ।।

"ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ
।। ೨೩ ।।

ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ ।
ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನಚೇತಸಃ " ।। ೨೪ ।।

ಸಕಲಕರ್ಮಗಳನ್ನು ಶ್ರೀಹರಿಪ್ರೀತಿಗಾಗಿ ಮಾಡಿ ಸಮರ್ಪಿಸಬೇಕೆಂಬ ನನ್ನ ಸಿದ್ಧಾಂತವನ್ನು 'ಇಲ್ಲಿ ಹೇಳಿರುವುದು ಪ್ರಾಮಾಣಿಕ, ಇದರಿಂದ ನನಗೆ ಪ್ರಯೋಜನವಿದೆ' ಎಂಬ ಶ್ರದ್ಧೆಯುಳ್ಳವರಾಗಿ, ಅಸೂಯಾದಿದೋಷ ರಹಿತರಾಗಿ ಯಾರು ಅನುಷ್ಠಾನಕ್ಕೆ ತರುವರೋ ಅವರು ಜ್ಞಾನದ ಮೂಲಕ ಸಂಸಾರದಿಂದ ಬಿಡುಗಡೆ ಹೊಂದುವರು.

ಯಾವ ಮಾನವರು ಮಾತ್ಸರ್ಯ ಮೊದಲಾದ ದೋಷಗಳಿಂದ ಯುಕ್ತರಾಗಿ ಹಿಂದೆ ನಿರೂಪಿಸಿದ ನನಗೆ ಅಭಿಮತವಾದ ಕರ್ಮಗಳನ್ನು ಅನುಷ್ಠಾನ ಮಾಡುವುದಿಲ್ಲವೋ ಅವರನ್ನು ವಿಪರೀತ ಜ್ಞಾನಿಗಳೆಂದೂ ವಿವೇಕವಿಲ್ಲದವರೆಂದೂ ನರಕಕ್ಕೆ ಹೋಗುವವರೆಂದೂ ತಿಳಿ.

**ವಿವರಣೆ** - ಭಗವತ್ ಪ್ರೀತಿಗಾಗಿ ಅವರವರ ವರ್ಣಾಶ್ರಮೋಚಿತ ಕರ್ಮಗಳನ್ನು ಮಾಡುವವರಿಗೆ ಉಂಟಾಗುವ ಮುಕ್ತಿರೂಪಫಲವನ್ನು, ವಿಹಿತಕರ್ಮ ತ್ಯಾಗಿಗಳಿಗೆ ನಿತ್ಯ ನರಕವನ್ನೂ ವರ್ಣಿಸುವ ಗೀತಾವಾಕ್ಯವನ್ನು ಉದಾಹರಿಸುವ ಮೂಲಕ ಶ್ರೀಮದಾಚಾರ್ಯರು, ಸರ್ವಕರ್ಮಗಳನ್ನು ಶ್ರೀಹರಿ ಪ್ರೀತಿಗಾಗಿ ಸಮರ್ಪಿಸಬೇಕೆಂಬ ಸಿದ್ಧಾಂತವನ್ನು ಸ್ಫುಟಪಡಿಸಿದ್ದಾರೆ. ಹೃಷೀಕೇಶತೀರ್ಥರ ಪಾಠ -

ಯೇ ತನ್ಮತಮಿದಂ ನಿತ್ಯಮನುತಿಷ್ಠಂತಿ ಸರ್ವದಾ ।
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ಸಂಸ್ಕೃತೇರ್ಭವಾತ್ ।
ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ತನ್ಮತಮ್ ।
ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಯಾನ್ನಷ್ಟಾನಚೇತಸಃ ।।

"ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।
ವಿಷ್ಣುಭಕ್ತಿಪರೋ ದೈವೋ ವಿಪರೀತಸ್ತಥಾಽಸುರಃ " ।। ೨೫ ।।

ಮುಕ್ತಿಯೋಗ್ಯರಾದ ಸಾತ್ವಿಕರು ಹಾಗೂ ನಿತ್ಯ ನರಕಕ್ಕೆ ಯೋಗ್ಯರಾದ ಅಸುರರು ಎಂಬುದಾಗಿ ಜೀವಸಮುದಾಯವು ಲೋಕದಲ್ಲಿ ಎರಡು ವಿಧವಾಗಿದೆ. ವಿಷ್ಣು ಭಕ್ತಿಯುಳ್ಳವರು ಸಾತ್ವಿಕ ಪ್ರಕೃತಿಗಳು, ವಿಷ್ಣುಭಕ್ತಿಹೀನರು ತಾಮಸ ಪ್ರಕೃತಿಗಳು.

ವಿವರಣೆ - 'ಯೇ ಮೇ ಮತಮಿದಂ' ಎಂಬಲ್ಲಿ ಈ ಹಿಂದೆ ಸ್ವೋಚಿತ ಕರ್ಮಾನಿಷ್ಠಾನರತರಿಗೆ ಸತ್‌ಫಲ ಇತರರಿಗೆ ಅನಿಷ್ಟ ಫಲವನ್ನು ವರ್ಣಿಸಲಾಯಿತು. ಕೆಲವರಿಗೆ ಸತ್ಕರ್ಮದಲ್ಲಿ ಆಸಕ್ತಿ, ಮತ್ತೆ ಕೆಲವರಿಗೆ ದುಷ್ಕರ್ಮಗಳಲ್ಲಿ ಆಸಕ್ತಿ ಬರಲು ಮೂಲ ಕಾರಣವೇನು ಎಂಬ ಪ್ರಶ್ನೆಗೆ ಸಾತ್ವಿಕಾದಿ ಸ್ವಭಾವವೇ ಮೂಲಕಾರಣವೆಂದು ನಿರೂಪಿಸಲು ಈ ಶ್ಲೋಕವು ಪ್ರವೃತ್ತವಾಗಿದೆ. ಇಲ್ಲಿ ಹೃಷೀಕೇಶತೀರ್ಥರ ಪಾಠ -

"ದ್ವಾವೇವ ಸರ್ಗೌ ಲೋಕೇಸ್ಮಿನ್" || ೨೫ ||

"ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತುಚಿತ್ |
ಸರ್ವೇ ವಿಧಿನಿಷೇಧಾಃ ಸ್ಯುರೇತಯೋರೇವ ಕಿಂಕರಾಃ" || ೨೬ ||

ಶ್ರೀವಿಷ್ಣುವನ್ನು ಯಾವಾಗಲೂ ಸ್ಮರಿಸುತ್ತಿರಬೇಕು. ಎಂದಿಗೂ ಮರೆಯಬಾರದು. ಎಲ್ಲ ವಿಧಿ ನಿಷೇಧಗಳ ಹಿನ್ನೆಲೆ ಹರಿಸ್ಮರಣೆ ಮೂಡಿಸುವುದೇ ಆಗಿದೆ.

ವಿವರಣೆ - ಸದಾ ವಿಷ್ಣು ಸ್ಮರಣೆಯೊಂದಿಗೆ ಮಾಡಿದ ಸತ್ಕರ್ಮ ಮಾತ್ರವೇ ಮಹಾಫಲದಾಯಕವಾದ್ದರಿಂದ ವಿಷ್ಣುಸ್ಮರಣೆಯು ಯಾವಾಗಲೂ ಅವಶ್ಯ ಕರ್ತವ್ಯವೆಂದು ನಿರೂಪಿಸುವ ಪ್ರಮಾಣ ವಾಕ್ಯವನ್ನು ಇಲ್ಲಿ ಆಚಾರ್ಯರು ಉದಾಹರಿಸಿದ್ದಾರೆ.

ಯಾವಾಗಲೂ ವಿಷ್ಣುಸ್ಮರಣೆ ಮಾಡುವುದರಲ್ಲೇ ವೇದಾಂತಕ್ಕೆ ತಾತ್ಪರ್ಯವಿರುವುದಾದರೆ, 'ಸಂಧ್ಯಾವಂದನೆ ಮಾಡಲೇಬೇಕು.' 'ಮಾಂಸ ಭಕ್ಷಣ ಮಾಡಬಾರದು' ಇತ್ಯಾದಿ ವಿಧಿನಿಷೇಧ ವಾಕ್ಯಗಳು ಅರ್ಥಹೀನವಾಗುವುದಿಲ್ಲವೇ ಎಂಬ ಆಶಂಕೆ ಸಹಜ. ಆದರೆ ವಿಹಿತಾಚರಣೆ ಮತ್ತು ನಿಷಿದ್ಧ ಪರಿತ್ಯಾಗಗಳು ವಿಷ್ಣುಸ್ಮೃತಿ ಬರಲೆಂದೇ ನಿರೂಪಿಸಲ್ಪಟ್ಟಿವೆ. ಆದ್ದರಿಂದ ವಿಷ್ಣುಸ್ಮೃತಿ ಸಹಿತವಾದ ಕರ್ಮಾನುಷ್ಠಾನ-ನಿಷಿದ್ಧ ಪರಿತ್ಯಾಗಗಳನ್ನೇ ವೇದ-ಶಾಸ್ತ್ರಗಳು ಪರಿಪೂರ್ಣವೆಂದು ಬಣ್ಣಿಸಿವೆ. ಈ ಹಿನ್ನೆಲೆಯಲ್ಲಿ ವಿಧಿನಿಷೇಧ ಶಾಸ್ತ್ರ ಅರ್ಥಹೀನವಾಗಿರದೆ ಸಕಲ ಕಾರ್ಯಗಳಲ್ಲೂ ವಿಷ್ಣು ಸ್ಮೃತಿ ಸಂಪಾದನೀಯವೇ ಆಗಿದೆಯೆಂಬ ಪ್ರಮೇಯವನ್ನು ತಿಳಿಸಿಕೊಡುತ್ತದೆ. || ೨೬ ||

"ಧರ್ಮೋ ಭವತ್ಯಧರ್ಮೋಽಪಿ ಕೃತೋ ಭಕ್ತೈಸ್ತವಾಚ್ಯುತ |
ಪಾಪಂ ಭವತಿ ಧರ್ಮೋಽಪಿ ಯೋ ನ ಭಕ್ತೈಃ ಕೃತೋ ಹರೇಃ" || ೨೭ ||

ವಿಷ್ಣು ಭಕ್ತರಾದವರು ಮಾಡಿದ ಅಧರ್ಮವೂ (ಪಾಪಕರ್ಮವೂ) ಧರ್ಮವೆನಿಸುತ್ತದೆ. ಅದು ಪುಣ್ಯಫಲವನ್ನೇ ನೀಡುತ್ತದೆ. ವಿಷ್ಣುಭಕ್ತಿ ಇಲ್ಲದವರು ಮಾಡಿದ ಪುಣ್ಯಕರ್ಮಾನುಷ್ಠಾನವೂ ಪಾಪವನ್ನೇ ನೀಡುತ್ತದೆ.

ವಿವರಣೆ - ಭಗವದ್‌ಭಕ್ತಿ ಇದ್ದರೆ ಮಾತ್ರ ಆ ಕರ್ಮವು ಪರಿಪೂರ್ಣವೆನ್ನಿಸುವುದಲ್ಲದೇ ಕೇವಲ ಕಟ್ಟುಪಾಡುಗಳ ಕುರುಡು ಪಾಲನೆ ಮಾತ್ರದಿಂದ ಅದು ಪೂರ್ಣವೆನ್ನಿಸದು. ಈ ಹಿನ್ನೆಲೆಯಲ್ಲಿ ಭಗವದ್‌ಭಕ್ತಿಯ ಮಾಹಾತ್ಮ್ಯವನ್ನು ಮತ್ತು ಅದನ್ನು ಪಡೆದ ಮಹಾತ್ಮರ ಶುಭಗತಿಯನ್ನು ತಿಳಿಸುವ ಪ್ರಮಾಣವಚನವನ್ನು ಆಚಾರ್ಯರು ಇಲ್ಲಿ ಉದಾಹರಿಸಿದ್ದಾರೆ.

ನವವಿಧ ದ್ವೇಷರಹಿತರಾದ ಶುದ್ಧರಾದ ವಿಷ್ಣುಭಕ್ತರು ಮೇಲು ನೋಟಕ್ಕೆ ಅಧರ್ಮದಂತೆ ಕಾಣುವ ಕಾರ್ಯವನ್ನು ಮಾಡಿದರೂ ಅಥವಾ ಪ್ರಮಾದದಿಂದ ಆಕಸ್ಮಿಕವಾಗಿ ಅಧರ್ಮವನ್ನು ಮಾಡಿದರೂ ವಿಷ್ಣುಭಕ್ತಿ ಇರುವ ಕಾರಣದಿಂದ ಪಶ್ಚಾತ್ತಾಪ ಮತ್ತು ಹೆಚ್ಚಿನ ಸತ್ಕರ್ಮಾನುಷ್ಠಾನದಿಂದ ಪುಣ್ಯಫಲವನ್ನೇ ಪಡೆಯುತ್ತಾರೆ. ವಿಷ್ಣುಭಕ್ತಿ ಇಲ್ಲದವರು 'ತಾನೇ ಸರ್ವಕರ್ತೃ' ಎಂಬ ಅಹಂಕಾರ ಮಮಕಾರವಶರಾಗಿ, ವೇದೋಕ್ತ ಕರ್ಮ ಮಾಡಿದರೂ ಅವರು ಶುಭಫಲವನ್ನು ಪಡೆಯುವುದಿಲ್ಲ.

ಆದ್ದರಿಂದಲೇ ವಿಷ್ಣುಭಕ್ತಿಯನ್ನು ಹೊಂದಿದ್ದ ಅಜಾಮಿಳ ಮುಂತಾದವರು ಪಾಪಕರ್ಮಗಳನ್ನು ಮಾಡಿದರೂ, ಪಶ್ಚಾತ್ತಾಪ ಮತ್ತು ಪ್ರಾಯಶ್ಚಿತ್ತಗಳಿಂದ ಪುನೀತರಾಗಿ ಹರಿಸ್ಮರಣೆಯಿಂದ ಸತ್ಫಲವನ್ನು ಪಡೆದರು. ದುರ್ಯೋಧನಾದಿಗಳು ಸತ್ಕರ್ಮಾನುಷ್ಠಾನ ಮಾಡಿದರೂ, ವಿಷ್ಣುಭಕ್ತಿ - ಸದಾಚಾರಗಳಿಲ್ಲದೇ ಸರ್ವಕರ್ತೃತ್ವದ ಭ್ರಮೆಯಿಂದ ಪುಣ್ಯಫಲವನ್ನು ಕಳೆದುಕೊಂಡು ಪಾಪವನ್ನೇ ಪಡೆದರು. ಹೀಗೆ ವಿಷ್ಣುಭಕ್ತರು ಅಧರ್ಮ ಮಾಡಿದರೂ ಪುಣ್ಯಫಲವನ್ನೂ, ಅಭಕ್ತರು ಪುಣ್ಯವನ್ನು ಮಾಡಿದರೂ ಪಾಪಫಲವನ್ನು ಪಡೆಯುತ್ತಾರೆ. 'ಕೃತೋ ಭಕ್ತೈಸ್ತವಾಚ್ಯುತ' ಎಂಬಲ್ಲಿ 'ಕೃತೋ ಭಕ್ತೈಃ ರಮೇಶಿತುಃ' ಎಂದು ಹೃಷೀಕೇಶತೀರ್ಥರ ಪಾಠ. ।। ೨೭ ।।

"ಮನ್ಮನಾ ಭವ ಮದ್‌ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ನಿತ್ಯಂ ಭವೇಚ್ಚ ಮನ್ನಿಷ್ಠೋ ಬುಭೂಷುಃ ಪುರುಷಸ್ತ್ವತಃ" ।। ೨೮ ।।

ನನ್ನಲ್ಲಿಯೇ ಮನಸ್ಸುಳ್ಳವನಾಗು. ನನ್ನಲ್ಲಿ ಭಕ್ತಿಯುಳ್ಳವನಾಗು. ನನ್ನ ಪ್ರೀತಿಗಾಗಿ ಸಕಲಕರ್ಮಗಳನ್ನು ಮಾಡು. ನನ್ನನ್ನೆ ನಮಸ್ಕರಿಸು. ವಿಷ್ಣುಸ್ಮೃತಿಯಿಂದ ಸಕಲಫಲಗಳು ದೊರಕುವುದರಿಂದ, ಸಂಸಾರದಿಂದ ಮುಕ್ತಿ ಬಯಸುವವನು ಯಾವಾಗಲೂ ನನ್ನಲ್ಲಿ (ವಿಷ್ಣುವಿನಲ್ಲಿ) ನಿಷ್ಠನಾಗಿರಬೇಕು.

ವಿವರಣೆ - ವಿಷ್ಣುಭಕ್ತಿ ಎಲ್ಲಾ ಸದ್ಗುಣಗಳಲ್ಲಿ ಶ್ರೇಷ್ಠವಾದುದು. ವಿಷ್ಣುಭಕ್ತಿ ಇದ್ದರೆ ಮಾತ್ರವೇ ಸತ್ಕರ್ಮಾನುಷ್ಠಾನ [illegible]

ಆದ್ದರಿಂದ ಶ್ರೀಹರಿಯಲ್ಲಿ ಸದಾಭಕ್ತಿಯನ್ನು ಮಾಡಬೇಕೆಂದು ಆಚಾರ್ಯರು ವಿವರಿಸುತ್ತ ತಮ್ಮ ಅಭಿಪ್ರಾಯಕ್ಕೆ ಪೂರಕವಾದ ಪ್ರಮಾಣವಾಕ್ಯವನ್ನು ಇಲ್ಲಿ

ಉದಾಹರಿಸಿದ್ದಾರೆ.

ತನ್ಮನಾ ಭವ ತದ್ಭಕ್ತಸ್ತದ್ಯಾಜೀ ತನ್ನಮಸ್ಕ್ರಿಯಃ ।
ನಿತ್ಯಂ ಭವೇಚ್ಚ ತನ್ನಿಷ್ಠೋ .......... ।। ಎಂಬುದು ಹೃಷೀಕೇಶತೀರ್ಥೀಯ ಪಾಠ.

ಏಷ ನಿತ್ಯಃ ಸದಾಚಾರೋ ಗೃಹಿಣೋ ವನಿನಸ್ತಥಾ ।
ವೈಶ್ವದೇವಂ ಬಲಿಂ ದಂತಧಾವನಂ ಚಾಪ್ಯೃತೇ ವಟೋಃ ।।೨೯।।

ಈವರೆಗೆ ನಿರೂಪಿಸಿದ ಶೌಚಾಚಾರ, ದೇವತಾಪೂಜಾ, ವಿಷ್ಣು ಸ್ಮೃತ್ಯಾದಿ ಧರ್ಮಗಳು ಗೃಹಸ್ಥರಿಗೂ ವಾನಪ್ರಸ್ಥರಿಗೂ ಸಮಾನವೇ ಆಗಿರುತ್ತದೆ. ವೈಶ್ವದೇವ - ಬಲಿಹರಣ - ದಂತಧಾವನವನ್ನು ಬಿಟ್ಟು ಉಳಿದೆಲ್ಲ ಸತ್ಕರ್ಮಗಳು ಬ್ರಹ್ಮಚಾರಿಗೂ ವಿಹಿತವೇ ಆಗಿವೆ.

ವಿವರಣೆ - ಗೃಹಸ್ಥ ವಾನಪ್ರಸ್ಥರ ಆಚಾರವಿಧಿಗಳು ಪ್ರಾಯಃ ಸಮಾನ. ಗೃಹಸ್ಥನು ಬಿಳಿಕೂದಲೇ ಮೊದಲಾದ ವಾರ್ಧಕ್ಯ ಧರ್ಮಗಳನ್ನು ತನ್ನಲ್ಲಿ ಕಂಡು ಅಥವಾ ಮೊಮ್ಮಗ ಹುಟ್ಟಿದ ಕೂಡಲೇ ಸಪತ್ನೀಕನಾಗಿ ಮಡದಿಯ ರಕ್ಷಣೆಯ ಹೊಣೆಯನ್ನು ಮಕ್ಕಳಿಗೆ ವಹಿಸಿ, ಸಾಗ್ನಿಕನಾಗಿ ಅರಣ್ಯಕ್ಕೆ ತೆರಳಿ, ಪಿತೃ - ದೇವತಾ - ಅತಿಥಿ ಪೂಜಾದಿಗಳನ್ನು ಮಾಡುತ್ತಲಿರಬೇಕು. ರೋಗಾದಿಗಳಿಂದ ಸಂಪೂರ್ಣಶಕ್ತಿ ಹ್ರಾಸವಾದಲ್ಲಿ ದೇಹವನ್ನು ಪರಿತ್ಯಜಿಸಬಹುದು. (ಶಕ್ತಿಹ್ರಾಸೇ ಹುತಾಶನೇ ದೇಹಂ ತ್ಯಜೇದಿತ್ಯಾದಯಃ ಸಪ್ತಮಸ್ಕಂಧೇ ಪ್ರಸಿದ್ಧಾಃ - ಶ್ರೀ. ಟಿ)

ಬ್ರಹ್ಮಚಾರಿಗೆ ದಂತಧಾವನವಿದೆಯೇ ?

ಬ್ರಹ್ಮಚಾರಿಯು ನೀರಿನಿಂದ, ಮಾವಿನ ಎಲೆ ಮುಂತಾದವುಗಳಿಂದ ಹಲ್ಲನ್ನು ತಿಕ್ಕಿ ಸ್ವಚ್ಛವಾಗಿರಿಸಿಕೊಳ್ಳಬೇಕು. ಕೆಲವು ವಿಶಿಷ್ಟ ದಿನಗಳಲ್ಲಿ ಕಾಷ್ಠದಿಂದ ದಂತಧಾವನ ಗೃಹಸ್ಥರೇ ಮೊದಲಾದವರಿಗೂ ನಿಷಿದ್ಧವೇ ಆಗಿದೆ. ಎಲ್ಲರಿಗೂ ಏಕಾದಶಿ - ಅಮಾವಾಸ್ಯೆ ದಿನದಂದು ತೃಣಪರ್ಣಾದಿಗಳಿಂದಲೂ ದಂತಧಾವನ ನಿಷೇಧಿಸಲ್ಪಟ್ಟಿದೆ. ವಿಧವೆ- ಬ್ರಹ್ಮಚಾರಿ-ಕನ್ಯೆಯರು ದಂತಕಾಷ್ಠದಿಂದ ಹಲ್ಲುಜ್ಜಬಾರದು. ಮಾವಿನ ಎಲೆ ಮುಂತಾದ ಎಲೆಗಳಿಂದ ಹಲ್ಲನ್ನು ಉಜ್ಜಿಕೊಂಡು ಸ್ವಚ್ಛವಾಗಿರಿಸಿಕೊಳ್ಳಬೇಕು. ಈ ಅಂಶವು ಛಲಾರಿ ಆಚಾರ್ಯರ 'ಸ್ಮೃತ್ಯರ್ಥಸಾರ'ದಲ್ಲೂ ಉಕ್ತವಾಗಿದೆ.

ವಿಧವಾವಟುಕನ್ಯಾನಾಂ ನ ಕಾಷ್ಠೈರ್ದಂತಧಾವನಮ್ ।
ತೃಣಪರ್ಣೈಃ ಸದಾ ಕುರ್ಯಾತ್ ಅಮಾಂ ಏಕಾದಶೀಂ ವಿನಾ ।।



ಏವಮೇವ ಯತೇಃ ಸ್ತ್ರೀಯವಿತ್ತೇನ ತು ವಿನಾ ಸದಾ ।

ಮೂಲಮಂತ್ರೈಸ್ಸದಾ ಸ್ನಾನಂ ವಿಷ್ಣೋರೇವ ಚ ತರ್ಪಣಮ್ ।।೩೦।।

ಬ್ರಹ್ಮಚಾರಿಗಳಂತೆ ಯತಿಗಳಿಗೂ ವೈಶ್ವದೇವ - ಬಲಿಹರಣ ಗಳಿರುವುದಿಲ್ಲ. ಇದಲ್ಲದೆ, ತಾನೇ ಸಂಗ್ರಹಿಸದೆ, ಅಯಾಚಿತವಾಗಿ ಬಂದ ದ್ರವ್ಯ ಮತ್ತು ವಸ್ತುಗಳಿಂದ ದೇವಪೂಜಾದಿ ಕಾರ್ಯ ನಡೆಸಬೇಕು. ಪ್ರಣವ - ಅಷ್ಟಾಕ್ಷರಾದಿ ಮೂಲಮಂತ್ರಗಳಿಂದ ಸ್ನಾನ, ಕೇವಲ ವಿಷ್ಣುವಿಗೆ ತರ್ಪಣ, ಯತಿಗಳ ಸಾಮಾನ್ಯಧರ್ಮವಾಗಿದೆ.

ವಿವರಣೆ - ಬ್ರಹ್ಮಚಾರಿ ಮತ್ತು ಸನ್ಯಾಸಿಗಳ ಕರ್ತವ್ಯವನ್ನು ಆಚಾರ್ಯರು ಇಲ್ಲಿ ನಿರೂಪಿಸಿದ್ದಾರೆ - ವೈಶ್ವದೇವ, ಗೃಹಸ್ಥರಿಗೆ ವಿಹಿತವಾದ ಇತರ ಹೋಮಗಳು, ಬಲಿಹರಣ, ಕಾಷ್ಠದಿಂದ ದಂತಧಾವನ ಬ್ರಹ್ಮಚಾರಿಗೆ ವಿಹಿತವಲ್ಲ. ಯತಿಯೂ ಹಿಂದಿನವರಂತೆ ಶೌಚಾಚಾರ ಪರಾಯಣನಾಗಿ ದೇವಪೂಜಾದಿಗಳನ್ನು ಮಾಡಬೇಕು. ಇದಲ್ಲದೆ, ಬ್ರಹ್ಮಚಾರಿ ಗೃಹಸ್ಥರಂತೆ, ತಾನು ತನ್ನ ಆಶ್ರಮ ಧರ್ಮಪಾಲನೆಗೆ ಧಾನ್ಯ ಸಂಗ್ರಹ -ಯಾಚನಾದಿಗಳನ್ನು ಮಾಡಬಾರದು. ಅಯಾಚಿತವಾಗಿ ಬಂದ ದ್ರವ್ಯದಿಂದಲೇ ತನ್ನ ಜೀವನ ಸಾಗಿಸಬೇಕು. ಯತಿಗಳಿಗೆ ಪ್ರಣವ - ಅಷ್ಟಾಕ್ಷರಾದಿ ಮೂಲಮಂತ್ರಗಳಿಂದಲೇ ಸ್ನಾನ ವಿಹಿತ. ಗೃಹಸ್ಥರಂತೆ ಪಿತೃ- ವಸು - ರುದ್ರ ಮುಂತಾದವರಲ್ಲಿ ಅಂತರ್ಯಾಮಿಯಾಗಿರುವ ಶ್ರೀಹರಿಗೆ ತರ್ಪಣಾದಿಗಳು ಇರುವುದಿಲ್ಲ. ಈ ವಿವರಣೆ ಶ್ರೀನಿವಾಸತೀರ್ಥರ ವ್ಯಾಖ್ಯಾನಾನುಗುಣವಾದುದು.

ಶ್ರೀಕೃಷ್ಣಾಚಾರ್ಯರು 'ವಿಷ್ಣೋರೇವ ಚ ತರ್ಪಣಮ್' ಎಂಬ ಭಾಗವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ - "ಮೂಲಮಂತ್ರಗಳಿಂದ ವಿಷ್ಣುವಿಗೇ ತರ್ಪಣವನ್ನು ನೀಡಬೇಕು. ಇತರ ಮಂತ್ರಗಳನ್ನು ಜಪಿಸಿ, ಇತರ ದೇವತೆಗಳಿಗೆ ತರ್ಪಣವನ್ನು ನೀಡಬಾರದು. (ತಥಾ ತರ್ಪಣಂ ಚ ವಿಷ್ಣೋರೇವ ಮೂಲಮಂತ್ರೈಃ ಕಾರ್ಯಮ್ । ನ ತ್ವಿತರಮಂತ್ರೈಃ ಇತರದೇವಾನಾಮ್)" ।। ೩೦ ।।

ವಿಶೇಷೋ ನಿಷ್ಕ್ರಿಯಯತೇರಜಲಾಂಜಲಿತಾ ತಥಾ ।
ತರ್ಪಣಂ ತು ಹರೇರೇವ ಯತೇರನ್ಯಸ್ಯ ಚೋದಿತಮ್ ।
ಸಮಿದ್ಧೋಮೋ ವಟೋಶ್ಚೈವ ಸ್ಮೃತ್ವಾ ವಿಷ್ಣುಂ ಹುತಾಶನೇ ।।೩೧।

ಮಾನಸಪೂಜಾದಕ್ಷರಾದ ಹಂಸ - ಪರಮಹಂಸರಿಗೆ ಬ್ರಹ್ಮಯಜ್ಞ - ದೇವಯಜ್ಞ - ಪಿತೃಯಜ್ಞ ಮೊದಲಾದ ಪಂಚಯಜ್ಞಗಳಿರುವುದಿಲ್ಲ. ತರ್ಪಣವಾದರೂ ವಿಷ್ಣುವಿಗೆ ಮಾತ್ರವೇ ಸಂಬಂಧಿಸಿದಂತೆ ವಿಹಿತ. ಇತರ ದೇವತೆಗಳಿಗೆ ತರ್ಪಣ ನೀಡಬಾರದು. ಸ್ನಾನ - ಗಾಯತ್ರೀ (ಬ್ರಹ್ಮಗಾಯತ್ರೀ) ಜಪ ಮುಂತಾದವು ಹಂಸ ಪರಮಹಂಸರಿಗೂ ಇದ್ದೇ ಇವೆ. ಬ್ರಹ್ಮಚಾರಿಗಳು ಅಗ್ನಿಯಲ್ಲಿರುವ ಮುಖ್ಯಪ್ರಾಣನಲ್ಲಿ ಸನ್ನಿಹಿತನಾದ ಪರಶುರಾಮನನ್ನು ಚಿಂತಿಸಿ ಸಮಿತ್ತುಗಳಿಂದ ಹೋಮ ಮಾಡಬೇಕು.

ವಿವರಣೆ - ಇಲ್ಲಿ ಆಚಾರ್ಯರು ಪರಮಹಂಸರ ಮತ್ತು ಕುಟೀಚಕಾದಿ ಯತಿಗಳ ಮತ್ತು ಬ್ರಹ್ಮಚಾರಿಗಳ ಆಚಾರ ಕ್ರಮವನ್ನು ನಿರೂಪಿಸುತ್ತಿದ್ದಾರೆ - ಈ ಶ್ಲೋಕಕ್ಕೆ ನೀಡಿರುವ ವಿವರಣೆ ಶ್ರೀನಿವಾಸತೀರ್ಥರ ವ್ಯಾಖ್ಯಾನಕ್ಕೆ ಅನುಗುಣವಾಗಿದೆ. ಶ್ರೀ ಕೃಷ್ಣಾಚಾರ್ಯರ ವ್ಯಾಖ್ಯಾನದ ಪ್ರಕಾರ ಇದರ ಅರ್ಥವು ಹೀಗಿದೆ -

ಕುಟೀಚಕ - ಬಹೂದಕ - ಹಂಸ - ಪರಮಹಂಸರೆಂಬುದಾಗಿ ಯತಿಗಳು ನಾಲ್ಕು ತೆರನಾಗಿದ್ದಾರೆ. ಅವರಲ್ಲಿ ನಿಷ್ಕ್ರಿಯಯತಿಗೆ (ಪರಮಹಂಸರಿಗೆ) ಶ್ರೀಹರಿಯನ್ನು ಮಾತ್ರವೇ ಉದ್ದೇಶಿಸಿ, ಕೈಯಲ್ಲಿ ನೀರು ಹಾಕಿ ತರ್ಪಣ ನೀಡುವುದಕ್ಕಿಂತ ಬೇರೆ ರೀತಿಯ ತರ್ಪಣವು ವಿಹಿತವಾಗಿದೆ. (ಪರಮಹಂಸಯತೇಃ ಹರೇರೇವ ತರ್ಪಣಂ ಅಜಲಾಂಜಲಿನಾ ವಿಶೇಷತಃ ಕಾರ್ಯಃ) ಪರಮಹಂಸರಿಂದ ಭಿನ್ನರಾದ ಕುಟೀಚಕಾದಿ ಮೂವರಿಗೆ ತರ್ಪಣದ ಜೊತೆಗೆ, ವಟುಗಳಂತೆ ಅಗ್ನಿಯಲ್ಲಿ ಸಮಿತ್ತು ಮೊದಲಾದ ದ್ರವ್ಯದಿಂದ ಹೋಮವೂ ವಿಹಿತವಾಗಿದೆ -. (ಅನ್ಯಸ್ಯ - ಪರಮಹಂಸಾದನ್ಯಸ್ಯ ಕುಟೀಚಕಾದಿಯತೇಃ ಹರೇರೇವ ತರ್ಪಣಮ್ ಕಾರ್ಯಂ ಇತಿ ಚೋದಿತಃ - ಕರ್ತವ್ಯತ್ವೇನ ಉಕ್ತಃ । ತಥಾ ಅನ್ಯಸ್ಯ ಯತೇಃ ಸಮಿದ್ಧೋಮಶ್ಚ - ಸಮಿದಾಹರಣಾದಿನಾ ಅಗ್ನೌ ಹೋಮಶ್ಚ ಉದಿತ ಇತಿ । ಕೃ. ವ್ಯಾ.) ।। ೩೧ ।।

ಸರ್ವವರ್ಣಾಶ್ರಮೈರ್ವಿಷ್ಣುರೇಕ ಏವೇಜ್ಯತೇ ಸದಾ ।
ರಮಾಬ್ರಹ್ಮಾದಯಸ್ತಸ್ಯ ಪರಿವಾರತ ಏವ ತು ।। ೩೨ ।।

ಬ್ರಾಹ್ಮಣಾದಿ ನಾಲ್ಕು ವರ್ಣದವರಿಂದ ಮತ್ತು ಬ್ರಹ್ಮಚರ್ಯಾದ್ಯಾಶ್ರಮಿಗಳಿಂದಲೂ ಸರ್ವೋತ್ತಮನಾದ್ದರಿಂದ ಪ್ರಧಾನವಾಗಿ ವಿಷ್ಣುವೇ ಪೂಜಿಸಲ್ಪಡುತ್ತಾನೆ. ರಮಾ - ಬ್ರಹ್ಮಾದಿ ದೇವತೆಗಳು ಶ್ರೀವಿಷ್ಣುವಿನ ಪರಿವಾರರೆಂಬ ಅನುಸಂಧಾನದಿಂದಲೇ ಪೂಜಿಸಲ್ಪಡುತ್ತಾರೆ.

ವಿವರಣೆ - ಸಕಲವರ್ಣಾಶ್ರಮದವರಿಗೂ ಸರ್ವೋತ್ತಮನಾದ ಶ್ರೀವಿಷ್ಣುವೇ ಆರಾಧ್ಯನೆಂಬ ಪ್ರಮೇಯವನ್ನು ಪ್ರಮಾಣವಚನದ ಮೂಲಕ ಆಚಾರ್ಯರು ಇಲ್ಲಿ ಪ್ರತಿಪಾದಿಸಿದ್ದಾರೆ. ಬ್ರಹ್ಮಾದಿಗಳಿಗೂ ಸ್ವಾತಂತ್ರ್ಯೇಣ ಪೂಜೆ ಶಾಸ್ತ್ರ ವಿಹಿತವಲ್ಲ. 'ಪರಿವಾರತ ಏವ ತು' ಬದಲಾಗಿ 'ಪರಿವಾರತಯೈವ ತು' ಎಂದು ಹೃಷೀಕೇಶತೀರ್ಥೀಯ ಪಾಠ.

" ಕವಿಂ ಪುರಾಣಮನುಶಾಸಿತಾರಮ್
ಅಣೋರಣೀಯಾಂಸಮನುಸ್ಮರೇದ್ ಯಃ ।
ಸರ್ವಸ್ಯ ಧಾತಾರಮಚಿಂತ್ಯರೂಪಮ್

ಆದಿತ್ಯವರ್ಣಂ ತಮಸಃ ಪರಸ್ತಾತ್ ।। ೩೩ ।।
ವೇದಾಹಮೇತಂ ಪುರುಷಂ ಮಹಾಂತಮ್
ಆದಿತ್ಯವರ್ಣಂ ತಮಸಸ್ತು ಪಾರೇ ।
ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ
ನಾಮಾನಿ ಕೃತ್ವಾಭಿವದನ್ ಯದಾಸ್ತೇ ।। ೩೪ ।।
ಧಾತಾ ಪುರಸ್ತಾದ್ಯಮುದಾಜಹಾರ
ಶಕ್ರಃ ಪ್ರವಿದ್ವಾನ್ ಪ್ರದಿಶಶ್ಚತಸ್ರಃ ।
ತಮೇವಂ ವಿದ್ವಾನಮೃತ ಇಹ ಭವತಿ
ನಾನ್ಯಃ ಪಂಥಾ ಅಯನಾಯ ವಿದ್ಯತೇ" ।। ೩೫ ।।

ಸರ್ವಜ್ಞನು, ನಿತ್ಯನೂತನನು, ಅತ್ಯಂತ ಸೂಕ್ಷ್ಮನು, ಸಮಗ್ರವಿಶ್ವದ ನಿಯಾಮಕನು ಮತ್ತು ಧಾರಕನು ಆದ, ಅಪರಿಮಿತಮಹಿಮನಾದ, ಸೂರ್ಯನಂತೆ ಪ್ರಕಾಶಮಯನಾದ ಶ್ರೀಹರಿಯನ್ನು ಯಾವ ಜೀವನು ಅರಿಯುವನೋ ಅವನು ಪ್ರಕೃತ್ಯತೀತನಾದ ಶ್ರೀಹರಿಯ ಅನುಗ್ರಹದಿಂದ ಪ್ರಕೃತಿ - ಅಜ್ಞಾನ - ಸಂಸಾರ ಬಂಧನಗಳಿಂದ ಬಿಡುಗಡೆ ಹೊಂದುವನು.

ಯಾವ ಅತುಲವಿಕ್ರಮನಾದ ಶ್ರೀಹರಿಯು ಚೇತನಾಚೇತನ ವಸ್ತುಗಳನ್ನು ಸೃಜಿಸಿ, ಅವುಗಳಿಗೆ ನಾಮರೂಪವನ್ನು ನೀಡುತ್ತಿರುವನೋ ಅಂತಹ ಮುಕ್ತಾಮುಕ್ತ ನಿಯಾಮಕನಾದ ಪ್ರಕೃತಿಯನ್ನು ಮೀರಿನಿಂತ ಅಮಿತ ಸೂರ್ಯಕಾಂತಿಯುಕ್ತನಾದ ಪರಿಪೂರ್ಣನಾದ ನಾರಾಯಣನನ್ನು ನಾನು (ವೇದಾಭಿಮಾನಿ ದೇವತೆ) ಪ್ರತ್ಯಕ್ಷವಾಗಿ ಕಂಡಿದ್ದೇನೆ.

ಚತುರ್ಮುಖನು ಸೃಷ್ಟಿಯ ಆದಿಯಲ್ಲಿ ಯಾವ ನಾರಾಯಣನನ್ನು ಸರ್ವೋತ್ತಮನೆಂದು ತಾನು ಕಂಡು ಉಪದೇಶಿಸಿದನೋ, ಅನಿರುದ್ಧಾದಿ ಚತುರ್ಮೂರ್ತಿಗಳನ್ನು ಚೆನ್ನಾಗಿ ಅರಿತಿರುವ ಶ್ರೇಷ್ಠ ಪ್ರವಚನಕಾರನಾದ ದೇವೇಂದ್ರನೂ ಯಾವ ನಾರಾಯಣನನ್ನು ಸರ್ವೋತ್ತಮನೆಂದು ವರ್ಣಿಸಿದ್ದಾನೋ, ಅಂತಹ ಪರಮಪುರುಷನನ್ನು ನಾನು ತಿಳಿದಿರುವೆ. ಈ ಪರಮಾತ್ಮನನ್ನು ಉತ್ತಮಾತ್ವಾದಿಗುಣವಿಶಿಷ್ಟನೆಂದು ಶ್ರವಣಾದಿಗಳಿಂದ ಅರಿತು ಪ್ರತ್ಯಕ್ಷವಾಗಿ ಯಾವ ಸಾಧಕನು ಕಾಣುವನೋ ಅವನು ಮುಕ್ತಿಯನ್ನು ಪಡೆಯುತ್ತಾನೆ. ಮುಕ್ತಿಗೆ ಜ್ಞಾನಕ್ಕಿಂತ ಬೇರೆ ಉಪಾಯವಿಲ್ಲ.

ವಿವರಣೆ - ವಿಷ್ಣುಸರ್ವೋತ್ತಮತ್ವಾದಿ ಮಹಾಪ್ರಮೇಯಗಳು ಶ್ರುತ್ಯಾದಿಗಳಲ್ಲಿ ಪ್ರಸಿದ್ಧವಾಗಿವೆಯೆಂಬುದನ್ನು ಸಾಧಕರಿಗೆ ತಿಳಿಸಲು ಶ್ರೀಮದಾಚಾರ್ಯರು ವೇದವಾಕ್ಯಗಳನ್ನೇ ಇಲ್ಲಿ ಉದಾಹರಿಸಿದ್ದಾರೆ. ಈ ವಾಕ್ಯಗಳು ನಾರಾಯಣನನ್ನು

ಜಗಜ್ಜನ್ಮಾದಿಕಾರಣ ಮತ್ತು ರಮಾ -ಬ್ರಹ್ಮಾದಿಗಳಿಗಿಂತ ಸರ್ವೋತ್ತಮ ಎಂದು ಪ್ರತಿಪಾದಿಸುವುದರ ಜೊತೆಗೆ ಸತ್ಕರ್ಮಾನುಷ್ಠಾನದೊಂದಿಗೆ ಇಂತಹ ಜ್ಞಾನವನ್ನು ಪಡೆದವನಿಗೆ ಮಾತ್ರವೇ ಮುಕ್ತಿಯೆಂದು ಸಾರುತ್ತಿವೆ. ಇದರಿಂದ ಸರ್ವೋತ್ತಮನಾದ ಶ್ರೀಹರಿಯ ಪ್ರೀತಿಗಾಗಿಯೇ ಸರ್ವಕರ್ಮಗಳನ್ನು ಸಮರ್ಪಿಸಬೇಕು ಮತ್ತು ವಿಷ್ಣು ಪರಿವಾರವೆಂಬ ಚಿಂತನೆಯಿಂದ ರಮಾ - ಬ್ರಹ್ಮಾದಿಗಳನ್ನು ಪೂಜಿಸಬೇಕು ಹಾಗೂ ಜ್ಞಾನವೇ ಮುಕ್ತಿಗೆ ಸೋಪಾನ ಎಂಬ ಪ್ರಮೇಯಗಳು ಪ್ರಾಮಾಣಿಕವೆಂದು ಸಿದ್ಧವಾಗುತ್ತದೆ.

೩೪ ನೆಯ ಶ್ಲೋಕದಲ್ಲಿ 'ಯದಾಸ್ತೇ' ಬದಲು 'ಯ ಆಸ್ತೇ' ಎಂದು ಹೃಷಿಕೇಶತೀರ್ಥೀಯ ಪಾಠ.

ಆನಂದತೀರ್ಥಮುನಿನಾ ವ್ಯಾಸವಾಕ್ಯಸಮುದ್ಧೃತಿಃ ।
ಸದಾಚಾರಸ್ಯ ವಿಷಯೇ ಕೃತಾ ಸಂಕ್ಷೇಪತಃ ಶುಭಾ ।। ೩೬ ।।

ಸದಾಚಾರಕ್ಕೆ ಸಂಬಂಧಿಸಿದಂತೆ; ಶ್ರೀವೇದವ್ಯಾಸರ ಮತ್ತು ವೇದಶಾಸ್ತ್ರಗಳ ವಾಕ್ಯಗಳನ್ನು ಈ ಕೃತಿಯಲ್ಲಿ ಉದಾಹರಿಸಲಾಗಿದೆ. ಸಂಕ್ಷಿಪ್ತವೂ ಸಕಲಾಭೀಷ್ಟದಾಯಕವೂ ಆದ ಈ ಕೃತಿ, ಶಾಶ್ವತವಾದ ಆನಂದ ನೀಡುವ ಶಾಸ್ತ್ರವನ್ನು ರಚಿಸಿದ ಶ್ರೀಮಧ್ವರಿಂದ ನಿರ್ಮಿಸಲ್ಪಟ್ಟಿದೆ.

ಅಶೇಷಕಲ್ಯಾಣಗುಣನಿತ್ಯಾನುಭವಸತ್ತನುಃ ।
ಅಶೇಷದೋಷರಹಿತಃ ಪ್ರೀಯತಾಂ ಪುರುಷೋತ್ತಮಃ ।। ೩೭ ।।

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತಾ
ಸದಾಚಾರಸ್ಮೃತಿಃ ಸಮಾಪ್ತಾ

ಅನಂತಕಲ್ಯಾಣಗುಣಗಳ ನಿತ್ಯಾನುಭೂತಿರೂಪನಾದ, ನಿರ್ಮಲ ದೇಹವುಳ್ಳ, ಪಾರತಂತ್ರ್ಯವೇ ಮೊದಲಾದ ದೋಷವಿದೂರನಾದ, ರಮಾ ಬ್ರಹ್ಮಾದಿಗಳಿಗಿಂತ ಉತ್ತಮನಾದ ಶ್ರೀಹರಿಯು ನಮ್ಮ ಮೇಲೆ ಪ್ರೀತನಾಗಲಿ.

ವಿವರಣೆ - ಸಕಲಕರ್ಮಗಳನ್ನು ಶ್ರೀಹರಿ ಪ್ರೀತಿಗಾಗಿ ಮಾಡಿ ಸಮರ್ಪಿಸಬೇಕೆಂಬ ಮಹತ್ತ್ವಪೂರ್ಣವಾದ ಶಾಸ್ತ್ರಸಾರವಾದ ಸಂದೇಶವನ್ನು ಈ ಕೃತಿಯ ಮೂಲಕ ಪ್ರಚುರಪಡಿಸಿದ ಏಕಾಂತಭಕ್ತರಾದ ಶ್ರೀಮದಾಚಾರ್ಯರು, ನಾರಾಯಣನ ಸಂಪ್ರೀತಿಯನ್ನು ಪ್ರಾರ್ಥಿಸಿ ಕೃತಿಯನ್ನು ಶ್ರೀಹರಿಗೆ ಸಮರ್ಪಿಸಿದ್ದಾರೆ.

**ಇಲ್ಲಿಗೆ ಸದಾಚಾರಸ್ಮೃತಿಯ ಕನ್ನಡ ಅನುವಾದ ಮುಗಿಯಿತು.**

